ಕಾಯಕವೇ ಕೈಲಾಸ



# ಸಿದ್ಧಗಂಗಾ



ಸಂಪುಟ : ೪೬ ಜುಲೈ ೨೦೧೦ ಸಂಚಿಕೆ : ೭



ಜೂನ್ ೧೭ ರಂದು ಬಳ್ಳಾರಿಯ ವಿಶಾಲನಗರದಲ್ಲಿ ಏರ್ಪಡಿಸಿದ್ದ ಶ್ರೀ ಶಿರಡಿ ಸಾಯಿಬಾಬಾ ನೂತನ ದೇವಾಲಯವನ್ನು ಪೂಜ್ಯ ಶ್ರೀಗಳವರು ಲೋಕಾರ್ಪಣೆ ಮಾಡಿದರು.



ಕರ್ನಾಟಕ ರಾಜ್ಯ ವೀರಶೈವ ನೌಕರರ ಸಂಘದವರು ಬೆಂಗಳೂರಿನಲ್ಲಿ ಏರ್ಪಡಿಸಿದ್ದ ಗುರುವಂದನಾ ಕಾರ್ಯಕ್ರಮವನ್ನು ಪೂಜ್ಯ ಶ್ರೀಗಳವರ ದಿವ್ಯಸಾನ್ನಿಧ್ಯದಲ್ಲಿ ಮುಖ್ಯಮಂತ್ರಿ ಶ್ರೀ ಬಿ.ಎಸ್. ಯಡಿಯೂರಪ್ಪ ಅವರು ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಚಿತ್ರದುರ್ಗ ಮುರುಘಾ ಮಠದ ಶ್ರೀ ಶರಣರು ಹಾಗೂ ಗಣ್ಯರು ಉಪಸ್ಥಿತರಿದ್ದರು.

ಸಂಪಾದಕ :
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ :
ಎಚ್.ಎಸ್. ಸಿದ್ಧಗಂಗಪ್ಪ

ಸಂಚಾಲಕ :
ಎಂ. ರೇಣುಕಾರಾಧ್ಯ

ಪ್ರಕಾಶಕರು:
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104.

ಮುದ್ರಕರು:
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ
ಆಫ್‌ಸೆಟ್ ಮುದ್ರಣಾಲಯ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು -572 104.

ವಿಳಾಸ :
"ಸಂಪಾದಕರು"
'ಸಿದ್ಧಗಂಗಾ' ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -೫೭೨ ೧೦೪


ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

**ಆವಾವ ಕಾಯಕವ ಮಾಡಿದರು ಬಸವೇಶ**
**ಆವಗಂ ಶರಣರನು ಸೇವಿಪೆನು ಬಸವೇಶ**

# ಸಿದ್ಧಗಂಗಾ

ಸಂಪುಟ : ೪೬ ಜುಲೈ ೨೦೧೦ ಸಂಚಿಕೆ : ೭

## ಒಳಪುಟಗಳಲ್ಲಿ ...............




ಚಂದಾ ವಿವರ : ವಾರ್ಷಿಕ ಚಂದಾ ರೂ. ೧೨೦/-
ಆಜೀವ ಸದಸ್ಯತ್ವ ರೂ. ೧೦೦೦/- ಬಿಡಿ ಪ್ರತಿ ರೂ. ೧೦.೦೦

## ದಾಸೋಹ ಚತುಷ್ಟಯ

**ಬ**ಸವಾದಿ ಶರಣರು ಲೋಕಕ್ಕೆ ನೀಡಿದ ನಿತ್ಯನೂತನ ಜೀವನಮೌಲ್ಯ ದಾಸೋಹ. ಕಾಯಕದ ಬಳಿವಿಡಿದು ಅರಳಿದ ದಾಸೋಹದಲ್ಲಿ ಆತ್ಮಕಲ್ಯಾಣ ಮತ್ತು ಲೋಕಕಲ್ಯಾಣವೆರಡೂ ವ್ಯಕ್ತವಾಗುತ್ತವೆ. **ದಾನಕ್ಕಿಂತ ದಾಸೋಹ ಶ್ರೇಷ್ಠ.** ದಾನ ಸೇವೆಯಲ್ಲಿ ಕರ್ತಭಾವವಿರುತ್ತದೆ. ಕೊಡುವ ಮನೋಭಾವ ಸೂಕ್ಷ್ಮವಾಗಿ ಅಹಂಕಾರನವರು ಭಾವಕ್ಕೆ ಕಾರಣವಾಗುತ್ತದೆ. ಆದರೆ ದಾಸೋಹದಲ್ಲಿ ನೀಡುವವನು ಕಿಂಕರತ್ವದಿಂದ ಸೇವಾಮುಖವಾಗಿ ಕ್ರಿಯಾಶೀಲನಾಗಿದ್ದು ಪಡೆಯುವವನು ಪ್ರಭುವೆಂಬ ಧನ್ಯತೆಯನ್ನು ಹೊಂದಿರುತ್ತಾನೆ.

ಶ್ರೀ ಸಿದ್ಧಗಂಗಾಶ್ರೀಗಳು ತ್ರಿವಿಧ ದಾಸೋಹ ಪ್ರಭುಗಳೆಂದೇ ಜನಮನದಲ್ಲಿ ಪೂಜ್ಯ ಸ್ಥಾನ ಪಡೆದಿದ್ದಾರೆ. ಶ್ರೀಗಳವರ ದಾಸೋಹ ನಿಷ್ಠೆ ಅನನ್ಯವಾದುದು; ಅನುಪಮವಾದುದು. ಅದು ಅನ್ನ ದಾಸೋಹವಾಗಿ ಹಸಿದ ಹೊಟ್ಟೆಗಳಿಗೆ ತೃಪ್ತಿಯನ್ನು ನೀಡುವುದಾಗಿರುವಂತೆಯೇ ಅಕ್ಷರ ದಾಸೋಹ ರೂಪದಲ್ಲಿ **'ಅಪರಿಮಿತದ ವಿಪರೀತ ಕತ್ತಲೆಯನ್ನು ಕಳೆಯಲು ಬಂದ'** ಜ್ಞಾನಜ್ಯೋತಿಯಾಗಿಯೂ ಬೆಳಗುತ್ತಿರುವಂತೆಯೇ, ಹಲವು ಹನ್ನೊಂದು ವಿಧದ ಭಯಭೀತಿಗಳಿಂದ ಕಳವಳಗೊಂಡ ಮನಸ್ಸುಗಳಿಗೆ ಯಂತ್ರೋದ್ಧರಣೆಗಳನ್ನು ನೀಡಿ ಭಯವನ್ನು ನಿವಾರಿಸುವ ಅಭಯ ದಾಸೋಹವೂ ಆಗಿ ಸಲಹುತ್ತಿರುವುದೂ ಆಗಿರುವುದು ಪುಣ್ಯ ವಿಶೇಷವೇ ಹೌದೆನ್ನುತ್ತಾರೆ ಹೃದಯವಂತರು, ಪ್ರಾಜ್ಞರು.

ಇದೀಗ ಈ ತ್ರಿವಿಧ ದಾಸೋಹಕ್ಕೆ ಮತ್ತೊಂದು ಮುಖಮಂಗಳವೂ ಇರುವುದನ್ನು ಶ್ರೀಗಳವರು ಅನಾವರಣ ಗೊಳಿಸುತ್ತ ನೂರಾಮೂರನೆಯ ತುಂಬು ವಯೋಮಾನದಲ್ಲಿಯೂ ಕರ್ತವ್ಯ ಶೀಲರಾಗಿದ್ದಾರೆ. ಕಳೆದ ವರ್ಷ ನೆರೆಹಾವಳಿಯಿಂದ ನರಳಿ ನೆಲಕಚ್ಚಿ ತಲೆಮೇಲೆ ಕೈಹೊತ್ತು ಕುಳಿತ ದುರ್ದೈವಿ ಸಂತ್ರಸ್ತರಿಗೆ ನೆರಳು ಕಲ್ಪಿಸಿಕೊಂಡು ಮಣಿಹದಲ್ಲಿ ಮುನ್ನಡೆದಿರುವುದು ಈ ನಾಡಿನ ಮಹಾಭಾಗ್ಯವೆಂದೇ ಹೇಳಬೇಕಾಗಿದೆ.

**ರಾಯಚೂರು ಜಿಲ್ಲೆ, ಮಾನ್ವಿ ತಾಲ್ಲೂಕು ಉಮಲಿಪನ್ನೂರಿನಲ್ಲಿ** ಇನ್ನೂರು ಸುಸಜ್ಜಿತ ಮನೆಗಳನ್ನು ಶ್ರೀಮಠದ ವತಿಯಿಂದ ನಿರ್ಮಾಣ ಮಾಡಿ ಕೊಡುವ **'ಆಶ್ರಯ ದಾಸೋಹ'**ದಲ್ಲಿ ನಿರತರಾಗಿದ್ದಾರೆ. ಯೋಜನೆಗೆ ಸುಮಾರು **ಮೂರುವರೆ ಕೋಟಿ ರೂಗಳಷ್ಟು** ವೆಚ್ಚವಾಗಲಿದ್ದು – ಕಟ್ಟಲಿರುವ ಒಂದೊಂದು ಮನೆಗೂ **ಒಂದೂವರೆ ಲಕ್ಷ ರೂಗಳು** ಬೇಕಾಗುತ್ತವೆ. ಈ ಯೋಜನೆಗಾಗಿಯೇ ಸಮಿತಿಯೊಂದು ರೂಪಿತವಾಗಿದ್ದು ನಿವೃತ್ತ ಮುಖ್ಯ ಇಂಜಿನಿಯರ್‌ರಾದ **ಶ್ರೀ ಚೆನ್ನಪ್ಪನವರ** ನೇತೃತ್ವದಲ್ಲಿ ಸೇವಾಶೀಲರಾದ ಸದಸ್ಯರು ಹಗಲಿರುಳೆನ್ನದೆ ದುಡಿಯುತ್ತಿದ್ದಾರೆ ಸಂತೋಷದಿಂದ.

ಈ ಸಂದರ್ಭದಲ್ಲಿ **'ಸಿದ್ಧಗಂಗಾ'** ತಮ್ಮಲ್ಲಿ ವಿನಮ್ರವಾಗಿ ಪ್ರಾರ್ಥಿಸುತ್ತದೆ. ಪತ್ರಿಕೆಯ ಆಜೀವ ಸದಸ್ಯರು, ವಾರ್ಷಿಕ ಚಂದಾದಾರರು, ಜಾಹಿರಾತುದಾರರು, ಶ್ರೀಮಠದ ಹಳೆಯ ವಿದ್ಯಾರ್ಥಿಗಳು, ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಯ ಆಶ್ರಯದಲ್ಲಿ ಶಿಕ್ಷಕರಾಗಿ, ನೌಕರರಾಗಿ ಸೇವೆ ಸಲ್ಲಿಸುತ್ತಿರುವ ಆತ್ಮೀಯರು, ಕೈಗಾರಿಕೋದ್ಯಮಿಗಳು, ವ್ಯಾಪಾರಸ್ಥರು, ಅಭಿಮಾನಿಗಳು, ಹಿತೈಷಿಗಳು, ಸಂಘಸಂಸ್ಥೆಗಳು ತಮ್ಮ ಯಥಾಶಕ್ತಿ ಕಾಣಿಕೆಯನ್ನು ಶ್ರೀಗಳವರ ಸತ್ಸಂಕಲ್ಪದ ಈ ಯೋಜನೆಯ ಸಾರ್ಥಕತೆಗೆ ಅರ್ಪಿಸುವ ಸಂಕಲ್ಪ ಮಾಡಬೇಕೆಂದು ಆಶಿಸುತ್ತದೆ.

**ಅನ್ನ, ಅಕ್ಷರ, ಅಭಯ ಮತ್ತು ಆಶ್ರಯ ದಾಸೋಹವೆಂಬ ಪರಮಪೂಜ್ಯ ಶ್ರೀ ಶ್ರೀಗಳವರ ದಾಸೋಹ ಚತುಷ್ಟಯಕ್ಕೆ ಕೈಗೂಡಿಸೋಣ, ಮುಂದೆ ಬರೋಣ, ಧನ್ಯರಾಗೋಣ.**

–ಸಂಪಾದಕ.







## ಋಣದ ರತ್ನಗಣಿ

**ಒ**ಮ್ಮೊಮ್ಮೆ ನಮಗೆ ಕಲಿಸಿದ ಅಧ್ಯಾಪಕರು ನೆನಪಾಗುತ್ತಾರೆ. ಏನವರ ಸರಳ ಜೀವನ. ಏನವರ ಅಧ್ಯಯನ ಶ್ರದ್ಧೆ. ಜ್ಞಾನಾಸಕ್ತಿ. ವಿದ್ಯಾರ್ಥಿಗಳ ಅಭ್ಯುದಯದಲ್ಲಿ ತಮ್ಮ ಜೀವನ ಸಾರ್ಥಕತೆಯನ್ನು ಕಾಣುತ್ತಿದ್ದ ಜೀವನ ತೃಪ್ತಿ. ಪ್ರತಿಯೊಬ್ಬ ವಿದ್ಯಾರ್ಥಿಯ ಉತ್ತರೋತ್ತರಕ್ಕಾಗಿ ನೀಡುತ್ತಿದ್ದ ಮಾರ್ಗದರ್ಶನ. ನೈತಿಕತೆಯ ಬಗ್ಗೆ ಅವರಿಗಿದ್ದ ಎಚ್ಚರ. ಸಮಯಪ್ರಜ್ಞೆಯಲ್ಲಿದ್ದ ನಿಷ್ಠೆ. ನಾವು ಕಂಡ ಪ್ರಾಥಮಿಕ ಹಂತದಿಂದ ಕಾಲೇಜಿನ ಹಂತದವರೆಗೂ ಕಲಿಸಿದ ಒಬ್ಬೊಬ್ಬ ಅಧ್ಯಾಪಕರದೂ ಮರೆಯಲಾರದ ವ್ಯಕ್ತಿತ್ವ. ವೃತ್ತಿಗೆ ಪಾವಿತ್ರ್ಯತೆಯನ್ನು ತಂದುಕೊಟ್ಟ ಮಹನೀಯರು. ಅವರುಗಳ ಸ್ಮರಣೆ ನಮಗೊಂದು ಬೆಳಕು ಎಂದೇ ಭಾವಿಸಿದ್ದೇವೆ. ನಾಗವಲ್ಲಿಯಲ್ಲಿ ಮಾಧ್ಯಮಿಕ ಶಾಲೆಯಲ್ಲಿ ಕಲಿಸಿದ ಶಿಕ್ಷಕರಾದ ಶ್ರೀ ಭಗವಾನ್‌ಸಿಂಗ್ ಅವರದು ಎಂಥ ವ್ಯಕ್ತಿತ್ವ. ಮನೆಯಿಂದ ಶಾಲೆಯವರೆಗೆ ನಡೆದು ಬರುವಾಗ ಅತ್ತಿತ್ತ ಕತ್ತೆತ್ತಿ ನೋಡದಂಥ ಸ್ವಭಾವ. ಕಾಲೇಜಿನಲ್ಲಿ ಇಂಗ್ಲೀಷ್ ಬೋಧಿಸಿದ ಪ್ರೊ। ತ್ಯಾಗರಾಜನ್ ಅವರ ಬೋಧನಾಶೈಲಿ ಮರೆಯಲಾರದಂಥದು. ಭೌತಶಾಸ್ತ್ರವನ್ನು ಕಲಿಸಿದ ಶ್ರೀ ಸೀಬಯ್ಯನವರ ಶಾಸ್ತ್ರ ವಿಷಯ ಕಲಿಸುವ ಅಪ್ಯಾಯಮಾನವಾದ ಮಾರ್ಗ, ಎತ್ತರದ ವ್ಯಕ್ತಿತ್ವವನ್ನು ತಮ್ಮದಾಗಿಸಿಕೊಂಡಿದ್ದ ಶ್ರೀ ಟಿ.ಎಸ್. ವೆಂಕಣ್ಣಯ್ಯನವರು, ವಿಷಯ ಪ್ರಭುತ್ವದ ಪ್ರಬುದ್ಧರೆನಿಸಿದ ಶ್ರೀ ಎ.ಆರ್. ಕೃಷ್ಣಶಾಸ್ತ್ರಿಗಳು. ಶ್ರೀಮಠದ ಸಂಸ್ಕೃತ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದ ಶ್ರೀ ವಿಶ್ವನಾಥ ಶಾಸ್ತ್ರಿಗಳ ಅನನ್ಯ ವ್ಯಕ್ತಿತ್ವ. ಕಥಾಕೋಶವೇ ಆಗಿದ್ದ ಶ್ರೀ ರುದ್ರಾರಾಧ್ಯಶರ್ಮ ಅವರು, ನೆನಪಿನಾಳದಲ್ಲಿಯೇ ಉಳಿದಿರುವ ಇನ್ನೂ ಥಟ್ಟನೆ ನೆನಪಿಗೆ ಬಾರದಿರುವ ಶುದ್ಧ ಜೀವನಕ್ಕೆ ಹೆಸರಾದ ಶಿಕ್ಷಕ ಬಂಧುಗಳು ಸ್ಮರಣೆಯ ದಾರಿಯಲ್ಲಿ ತೂಗುದೀಪಗಳಾಗಿ ಕಾಣ ಬರುತ್ತಾರೆ. ಕವಿವಾಣಿ ನೆನಪಾಗುತ್ತದೆ 'ತಿಳಿದು ನೋಡಿದರೆ ಬಾಳು ಎಂಬುದಿದು ಋಣದ ರತ್ನಗಣಿ'.

*

ॐ



# ಶ್ರೀ ಸಿದ್ಧಲಿಂಗೇಶ್ವರ ವಚನ

*ನಿರ್ವಿಕಾರಭಾವದಲ್ಲಿ ತೋರಿದ*
*ಗರ್ವ ಬಿಳಿಯ ಮದಗಜವ ಕಳೆವರೆ ಅಳವಲ್ಲ ನೋಡಾ*
*ಬಿಳಿಯ ಮದಗಜನ ಶಿರವ ಉರಿಯ ಚರಣದಲ್ಲಿ ಮೆಟ್ಟಿ*
*ನಿರವಯನ ಬೆರೆದು ನಿಜ ಲಿಂಗೈಕ್ಯವಾದೆನು ಕಾಣಾ*
*ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.*

ಶರಣಲಿಂಗವೆಂಬ ಭಿನ್ನಾಭಾವರಹಿತವಾದ ಚಿದಹಂಕಾರದಲ್ಲಿ ಶುದ್ಧವಿದ್ಯಾಸ್ವರೂಪವಾದ ಶರಣರಲ್ಲುಂಟಾದ ಸತ್ತ್ವಿಸಮ್ಯಗ್ ಜ್ಞಾನಂಗಳಾಚರಿಸಿ ಬಿಡುವರೆ ಭಿನ್ನ ಮಾರ್ಗವನುಳ್ಳವೇದಾಂತ ಸಿದ್ಧಾಂಅಗಳಿಗಸಾಧ್ಯವಾಗಿರ್ಪುದು.

ಅಂತಪ್ಪ ಶುದ್ಧ ಸಾತ್ವಿಕ ಸ್ವರೂಪವಾದ ಶರಣ, ತನ್ನ ಸುಜ್ಞಾನವೆಂಬ ಶಿರಸ್ಸನು ಚಿದಗ್ನಿಸ್ವರೂಪಾದ ಪರಶಿವ ಲಿಂಗದ ಚರಣಾರವಿಂದದಲ್ಲಿ ಧ್ಯಾನಬಲದಿಂದೆ ನ್ಯಾಸವ ಮಾಡೀ, ನಿರಾಕಾರ ಬ್ರಹ್ಮದಲ್ಲಿಕೂಡಿ, ಸಹಜ ಸಮರಸೈಕ್ಯವು ದೊರೆಕೊಂಡಿತ್ತೆನಗೆ ಕಂಡಾಯೆಂದು ಶರಣಲಿಂಗದ ಕೂಡೆ ಮಾಡುವ ಪ್ರಶ್ನಾಳಾಪ - ಎನ್ನುತ್ತದೆ ವಚನ.

(ಕೃಪೆ : ಷಟ್‌ಸ್ಥಲಜ್ಞಾನಿ ಸೋಮಶೇಖರಶಿವಯೋಗಿಕೃತ ತೋಂಟದ ಸಿದ್ಧಲಿಂಗೇಶ್ವರನ ಷಟ್‌ಸ್ಥಲ ಜ್ಞಾನಸಾರಾಮೃತದ ಬೆಡಗಿನ ವಚನದ ಟೀಕೆ - ವೀರಶೈವ ಅಧ್ಯಯನ ಸಂಸ್ಥೆ- ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ - ಡಂಬಳ- ಗದಗ)

# ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

'ನಡೆದು ನಿರ್ಗಮನಿಯಾದೆ ನುಡಿದು ನಿಶ್ಯಬ್ದಿಯಾದೆ'
ಬಿಡದೆಲ್ಲ ಸೇವೆಯ ನಡೆಸಿದೆ । ಎನುತಿರುವ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ದಾಸೋಹವೆ ಜಮತಪವು ದಾಸೋಹವೆ ಯೋಗವು
ದಾಸೋಹವೆ ಗುರುಲಿಂಗಜಂಗಮವು । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಆಚಾರಪಂಚಗಳ ಅರಿವಿನಿಂದಾಚರಿಪ
ಅಷ್ಟಾವರಣಗಳ ಬೆಳಗಿರುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸರ್ವಸಂದೇಹಗಳ ಕಳೆದು ಕಳಕಳಿಸುತ
ಸರ್ವಜೀವಿಗಳ ಸಲಹುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅಳಿದುಳಿಯಲಾಶಿಪೆ ನಿನ್ನ ಶಿವಚರಣದೊಳು
ಕಳೆದು ಮನದ ಮಲಿನ ಮಮಕಾರ । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಧರೆಗೆ ದೊಡ್ಡವರೆನಿಸಿಕಿರಿಯನು ತಾನೆಂಬ
ಹಿರಿತನವ ಮರೆದಿರುವ ವರ ಗುರುವ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಲಿಂಗವ ಕಂಡವನೆ ತನ್ನ ತಾ ಮರೆದವನೆ
ಮಹಘನವನೊಳಕೊಂಡ ಪರಿಣಾಮಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬ್ರಹ್ಮಬರೆಹವ ತೊಡೆದು ಲಿಂಗಲಿಖಿತ ಬರೆವ
ಬ್ರಹ್ಮನ ಬರೆಹವ ನರಿತಿರುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿಮ್ಮಮಹಿಮೆಯನು ನಾನೇನು ಬಲ್ಲೆನು
ನಿಮ್ಮನರಿತವರು ಇರಬಹುದು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

- ಹೆಚ್.ವಿ. ವೀರಭದ್ರಯ್ಯ







# ಇಸ್ಲಾಂ ಹಾಗೂ ವೀರಶೈವ ಸಂಸ್ಕೃತಿ - ಒಂದು ಚಿಂತನೆ *

-ಪ್ರೊ. ಡಿ. ಜವರೇಗೌಡ

ಜಗತ್ತಿನ ಸಕಲ ಸಂಸ್ಕೃತಿಗಳ ಹುಟ್ಟು ವಿಕಾಸಗಳಿಗೆ ಧರ್ಮಗಳೇ ಮೂಲ. ಅವು ಪರಸ್ಪರಾವಲಂಬಿಗಳೆಂದರೂ ಸಲ್ಲುತ್ತದೆ. ಮೂಲತಃ ಮನುಷ್ಯನ ಮನಸ್ಸೇ ಧರ್ಮ ಸಂಸ್ಕೃತಿಗಳ ಬೀಜಕೋಶವೂ ಹೌದು, ಬೀಜ ಮೊಳೆತು ಸಸಿಯಾಗಿ ಮರವಾಗಿ ಹರಡಿಕೊಳ್ಳುವ ಕ್ಷೇತ್ರವೂ ಹೌದು. ಪ್ರಕೃತಿ ವಿಶ್ವಶಕ್ತಿಯ ಸಾಕಾರರೂಪವಾದರೆ, ಧರ್ಮ ಸಂಸ್ಕೃತಿಗಳು ಮಾನವನ ಸಂಸೃಷ್ಟಿ. ಜಿಹಾದ್ ಕ್ರೂಸೇಡ್ ದಿಗ್ವಿಜಯಗಳ ಮೂಲಕ ಧರ್ಮಗಳು ದುಷ್ಟ(?) ಶಕ್ತಿಗಳನ್ನು ನಿಗ್ರಹಿಸಿ, ಅಧರ್ಮವನ್ನು ತೊಡೆದು, ಇತಿಹಾಸವನ್ನು ನಿರ್ಮಿಸುತ್ತವೆಂದು ಇತಿಹಾಸಕಾರರು ಪ್ರತಿಪಾದಿಸುವುದುಂಟು. ಯುರೋಪೀಯ ಜನಾಂಗಗಳು ಜಗತ್ತನ್ನೆಲ್ಲ ಗೆದ್ದು, ಜ್ಞಾನ-ವಿಜ್ಞಾನ ತಾಂತ್ರಿಕ ಕ್ಷೇತ್ರಗಳಲ್ಲಿ ಕ್ರಾಂತಿಯುಂಟುಮಾಡಲು ಕ್ರಿಸ್ತ ಧರ್ಮದ ಪ್ರಭಾವವೇ ಕಾರಣವೆಂದು ಘೋಷಿಸುವವರೂ ಇದ್ದಾರೆ. ಇತಿಹಾಸ ನಿರ್ಮಾಣದಲ್ಲಿ ಮತಗಳು ಪ್ರಧಾನ ಪಾತ್ರ ವಹಿಸುತ್ತವೆಂಬುದರಲ್ಲಿ ಸಂಶಯವಿಲ್ಲ. ವಾಸ್ತವಾಂಶಗಳನ್ನು ಮುಚ್ಚಿ ಮತೀಯ ದೃಷ್ಟಿಯಿಂದಲೇ ಇತಿಹಾಸವನ್ನು ಬರೆಸುವ, ಒರಸುವ, ತಿದ್ದುವ, ತಿರಿಚುವ ಸನ್ನಾಹಗಳು ಮೇಲಿಂದ ಮೇಲೆ ನಡೆಯುತ್ತವೆಂಬುದಕ್ಕೆ ನಮ್ಮ ಸುತ್ತ ಮುತ್ತ ಅನೇಕ ದೃಷ್ಟಾಂತಗಳು ದೊರೆಯುತ್ತವೆ. ಕ್ರಿಶ್ಚಿಯನ್ನರು ರಚಿಸಿದ ಭಾರತೀಯ ಇತಿಹಾಸದಲ್ಲಿ ಅನೇಕ ನ್ಯೂನತೆಗಳಿವೆಯೆಂದು ತಿಳಿದು ಅದನ್ನು ತಿದ್ದಲು ಹಿಂದೂ ವಿದ್ವಾಂಸರು ಪ್ರಯತ್ನಿಸುವುದುಂಟು.

ಅದೇನೇ ಇರಲಿ, ಮನುಷ್ಯನ ಭಾವ ಭಾವನೆ ಆಲೋಚನೆ ಕಲ್ಪನೆಗಳ ಮೇಲೆ, ಅವನ ನಡೆ ನುಡಿ ನಂಬಿಕೆಗಳ ಮೇಲೆ, ರೂಢಿ ಸಂಪ್ರದಾಯಗಳ ಮೇಲೆ, ಅವನ ದೈನಂದಿನ ವ್ಯವಹಾರಗಳ ಮೇಲೆ, ನೀತಿ ನಿಯಮಗಳ ಮೇಲೆ, ಅವನು ಬಳಸುವ ಪದಾರ್ಥಗಳ ಮೇಲೆ ಮತಗಳು ಅಚ್ಚಳಿಯದ ಪ್ರಭಾವವನ್ನು ಬೀರುತ್ತವೆನ್ನುವುದು ನಿಸ್ಸಂದೇಹ. ದೇವರೆಂಬ ವಸ್ತುವೂ, ಆ ವಸ್ತುವಿನ ಸುತ್ತ ನೇಯ್ದುಗೊಂಡ ಪುರಾಣ ಧರ್ಮಶಾಸ್ತ್ರಗಳೂ, ಆ ವಸ್ತುವಿನ ರಕ್ಷೆಗಾಗಿ ಕಟ್ಟಿದ ದೇವಾಲಯಗಳು ಅವನ ಕಲ್ಪನೆಗಳೇ. ಇಡೀ ದೇವಾಲಯ ಸಂಸ್ಕೃತಿ, ಅದರ ಶಾಖೆಗಳಂತೆ ಹರಡಿಕೊಂಡಿರುವ ಶಿಲ್ಪ, ವಾಸ್ತುಶಿಲ್ಪ, ಚಿತ್ರಕಲೆ, ಸಂಗೀತ ನೃತ್ಯ-ಕೊನೆಗೆ ಪೌರೋಹಿತ್ಯ ಇವೆಲ್ಲವೂ ಮತಗಳು ಜಗತ್ತಿಗೆ ನೀಡಿರುವ ಕೊಡುಗೆಗಳು, ಸ್ವರ್ಗ ನರಕಗಳನ್ನು ಸೃಷ್ಟಿಸಿದ್ದು ಮತಗಳೇ. ತಾನೇ ಸೃಷ್ಟಿಸಿದ ಮತಗಳ, ಶಾಸ್ತ್ರಗಳ, ರೂಢಿ ಸಂಪ್ರದಾಯಗಳ ಸ್ವರ್ಗನರಕಗಳ ಸೆರೆಯಲ್ಲಿ ಸಿಕ್ಕಿಕೊಂಡು ಮನುಷ್ಯ ಒದ್ದಾಡುತ್ತಿರುವುದೂ ಉಂಟು.

ಮಾನವನ ಸರ್ವೋದ್ಧಾರವೇ ಜಗತ್ತಿನ ಎಲ್ಲ ಧರ್ಮಗಳ ಗುರಿ. ಪ್ರಾರಂಭದಲ್ಲಂತು ಈ ಗುರಿ ನಿಶ್ಚಿತ. ನಿರ್ದಿಷ್ಟ ಸಮಾಜದ ಹಿನ್ನಲೆಯಲ್ಲಿ, ಅದರ ಏಕತೆ, ಭದ್ರತೆ ಹಾಗೂ ಕ್ಷೇಮಾಭ್ಯುದಯವನ್ನು ಗಮನದಲ್ಲಿರಿಸಿಕೊಂಡು, ಸೃಷ್ಟಿಯ ರಹಸ್ಯದ ಬಗ್ಗೆ ಏಕಾಂತವಾಗಿ ಆಲೋಚನೆ ನಡೆಸಿದ ಪರಿಣಾಮವಾಗಿ ತಾನು ಕಂಡುಕೊಂಡ ಸತ್ಯದ ಬೆಳಕಿನಲ್ಲಿ ಒಬ್ಬ ಪ್ರವಾದಿಯೋ, ಆಚಾರ್ಯನೋ, ಸಂತನೋ ಒಂದು ಹೊಸ ದರ್ಶನವನ್ನು, ಹೊಸ ತತ್ತ್ವವನ್ನು, ಹೊಸ ನೀತಿಯನ್ನು ರೂಪಿಸಲಾಗಿ ಹೊಸ ಧರ್ಮ ತಲೆಯೆತ್ತುತ್ತದೆ. ಮತಾ ಚಾರ್ಯ ಬದುಕಿರುವ ತನಕ ಆ ಧರ್ಮವನ್ನು ಜನ ಭಕ್ತಿಯಿಂದ ಗೌರವಿಸುತ್ತಾರೆ. ನಿಯಮ ನಿಷ್ಠೆಗಳಿಂದ ಆಚರಿಸುತ್ತಾರೆ. ಅವನ ನಂತರ ಆ ಆಚಾರ್ಯಗದ್ದುಗೆಗಾಗಿ ಅವನ ಅನುಯಾಯಿಗಳಲ್ಲಿ ಕಾದಾಟ ಪ್ರಾರಂಭವಾಗುತ್ತದೆ; ಅನುಯಾಯಿಗಳಿಗೆ ಬೇಕಾದ್ದು ಅವನ ಪೀಠವೇ ಹೊರತು, ನೀತಿ ತತ್ತ್ವಗಳಲ್ಲ. ಬರಬರುತ್ತ ಆ ಧರ್ಮ ಪುರೋಹಿತರ, ವ್ಯಾಖ್ಯಾನಕಾರರ, ಸ್ವಾರ್ಥಪರರ ಹಾಗೂ ಸಂಕುಚಿತ ಸ್ವಭಾವದ ಸಂಪ್ರದಾಯಶರಣರ ಸ್ವತ್ತಾಗಿ, ಅವರ ಇಚ್ಛೆಯನ್ನು ಪಾಲಿಸುವ ಸಾರೋಟಿನ ಕುದುರೆಯಾಗುತ್ತದೆ. ಕ್ರಾಂತಿಯ

* ಮಾಜಿ ಉಪ ಕುಲಪತಿಗಳು, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

ಬಸಿರಿನಲ್ಲಿ ಹುಟ್ಟಿ, ವಿಕ್ರಮಿಸಿ ಅದರ ಜೀವಾತುವಾಗಿ, ಕ್ರಾಂತದೃಷ್ಟಿಯೇ ಅದರ ಪ್ರಾಣವಾಯುವಾಗಿರುವ ಧರ್ಮ ಯುಗಧರ್ಮಕ್ಕನುಗುಣವಾಗಿ ವಿಕಾಸ ಹೊಂದದೆ, ಜನನ ಸ್ಥಿತಿಯಲ್ಲಿಯೇ ಮುಂದುವರಿಯುತ್ತಿರುವುದು ಶ್ರೇಯಸ್ಕರವಲ್ಲ. ಆ ಸ್ಥಿತಿಯೇ ಮುಂದುವರಿಯಬೇಕೆಂದು ಅದಕ್ಕೆ ನಿಗ್ರಹಗಳನ್ನು ತೊಡಿಸಿರುವುದೂ ಉಂಟು. ಅಷ್ಟಕ್ಕೇ ತೃಪ್ತರಾಗದ ಪುರೋಹಿತರು ಅದರ ಮೂಲ ಸ್ವರೂಪವನ್ನೇ ಬದಲಾಯಿಸಿ ವಿಕಾರಗೊಳಿಸಿರುವುದೂ ಉಂಟು. ವೈಜ್ಞಾನಿಕ ಪ್ರಗತಿಯೂ ತನಗೂ ಏನೇನೂ ಸಂಬಂಧವಿಲ್ಲದಂತೆ ಆ ಧರ್ಮ ವರ್ತಿಸುತ್ತದೆ. ಕ್ರಾಂತದರ್ಶಿಗಳೂ ವಿಕಾಸಪರರೂ ಆದ ಪೂರ್ವಾಚಾರ್ಯರು ವಿಜ್ಞಾನ, ತಂತ್ರ ವಿಜ್ಞಾನಗಳ ಪ್ರಭಾವದಿಂದ ಜಗತ್ತು ಸಂಕುಚಿತವಾಗಿರುವ, ಮನುಕುಲ ಮಿಲನ ಸೌಲಭ್ಯ ಸಾಧ್ಯವಾಗಿರುವ ಇಪ್ಪತ್ತನೆಯ ಶತಮಾನದಲ್ಲಿ ಹುಟ್ಟಿದ್ದರೇ ತಾವೇ ರೂಪಿಸಿದ ಧರ್ಮಗಳಿಗೆ ಹೊಸ ಚೈತನ್ಯವನ್ನೊದ್ಗುತ್ತಿದ್ದರೆಂಬುದರಲ್ಲಿ ಲವಲೇಶವೂ ಸಂದೇಹವಿರಲಾರದು. ಶಿಲಾಯುಗದ ಉಪಕರಣಗಳೆಂತು ಆಧುನಿಕ ಯುಗದ ಆವಶ್ಯಕತೆಗಳನ್ನು ಪೂರೈಸಲಾರವೋ, ಅದೇ ರೀತಿ ಪ್ರಾಚೀನ ಜೀರ್ಣತತ್ತ್ವಗಳು ವಿಜ್ಞಾನ ಯುಗದ ಬೌದ್ಧಿಕ ಅಥವಾ ಆಧ್ಯಾತ್ಮಿಕ ತೃಷೆಯನ್ನು ನೀಗಲಾರವು. ಹಳೆಯ ಒಡವೆಗಳನ್ನು ಕರಗಿಸಿ, ನವೀನ ರುಚಿಗೊಗ್ಗುವ ರೀತಿಯಲ್ಲಿ ಹೊಸ ಆಭರಣಗಳನ್ನು ತಯಾರಿಸಿಕೊಳ್ಳುವಂತೆ ಓಬಿರಾಯನ ಕಾಲದ ಕಲ್ಪನೆಗಳನ್ನು ಪರಿಷ್ಕರಿಸಿ, ಅವುಗಳಿಗೆ ಹೊಸ ಚೈತನ್ಯವನ್ನು ತುಂಬುವುದರ ಜತೆಗೆ ಹೊಸ ಆಲೋಚನೆ ಭಾವನೆಗಳ ಉಗಮಕ್ಕೆ ಎಡೆಮಾಡಿಕೊಡ ಬೇಕಾಗುತ್ತದೆ. ಜಡತೆಯ ಮರಣ, ಚಲನೆಯ ಜೀವನ ಎನ್ನುವುದನ್ನು ಧಾರ್ಮಿಕ ಮುಖಂಡರೂ ಅರ್ಥಮಾಡಿಕೊಳ್ಳಬೇಕಾಗುತ್ತದೆ.

ಮಹಮದ್ ಮತ್ತು ಬಸವೇಶ್ವರರಿಬ್ಬರೂ ಸಂವೇದನಾಶೀಲ ವ್ಯಕ್ತಿಗಳು. ತಮ್ಮ ಸುತ್ತಮುತ್ತಣ ಪರಿಸರಕ್ಕೆ, ಸ್ಥಿತಿಗತಿಗಳಿಗೆ, ಅನ್ಯಾಯ ಅಧರ್ಮಗಳಿಗೆ ಸ್ಪಂದಿಸಿದ, ಲೋಕಕಾರುಣ್ಯವೇ ಮೂರ್ತಿವೆತ್ತಂತಿದ್ದ ಹಿರಿಯ ಚೇತನಗಳು, ವಿಶ್ವವಿಭೂತಿಗಳು. ಅವರಿಬ್ಬರೂ ಹುಟ್ಟಿದ ಸಮಾಜ ಛಿದ್ರ ವಿಚ್ಛಿದ್ರಗಳ, ಅನೀತಿ ಅನ್ಯಾಯಗಳ, ಕಾದಾಟ ಹೊಡೆದಾಟಗಳ, ಸಂಚು ಹೊಂಚುಗಳ, ದ್ವೇಷಾಸೂಯೆಗಳ, ಅಶಾಂತಿ ತಳಮಳಗಳ, ಅಜ್ಞಾನ ಮೌಢ್ಯಗಳ ರಣರಂಗವಾಗಿದ್ದುವು. ತಿಪ್ಪೆಯಾಗಿದ್ದುವು, ನರಕವಾಗಿದ್ದುವು, ಕೊಳಚೆಯಲ್ಲಿ ಹುಟ್ಟಿ ಬೆಳೆದ ಗಿಡಮರಗಳು ಮಾಲಿನ್ಯವನ್ನೆಲ್ಲ ಹೀರಿಕೊಂಡು ಹೂವಾಗಿ ಪರಿಮಳವನ್ನು ಹರಡುವಂತೆ, ಸುಮಧುರ ಫಲವನ್ನು ಕೊಡುವಂತೆ, ಸಮುದ್ರಮಥನ ಕಾಲದಲ್ಲಿ ಒಗೆದ ನಂಜನ್ನು ಮಹಾದೇವ ತನ್ನ ಕಂಠದಲ್ಲಿರಿಸಿಕೊಂಡು, ಜಗತ್ತಿಗೇ ಅಮೃತವನ್ನು ನೀಡಿದಂತೆ ಇವರಿಬ್ಬರೂ ಐಕ್ಯಭಂಗಕಾರಿಗಳಾದ ದುಶ್ಶಕ್ತಿಗಳ ದುರ್ವ್ಯವಸ್ಥೆಗಳ ದುರ್ಮಂತ್ರಗಳ ದುರಾಚಾರಗಳ ವಿರುದ್ಧ ಹೋರಾಟ ನಡೆಸಿ, ಆ ಹೋರಾಟದ ಪರಿಣಾಮವಾಗಿ ಹೊಮ್ಮಿದ ಉರಿನಂಜನ್ನುಂಡು, ತ್ರಿವಿಕ್ರಮಾಕಾರವಾಗಿ ಬೆಳೆಯುತ್ತಾರೆ. ಸಮಾಜವನ್ನು ತಿಪ್ಪೆಗೊಳಿಸಿದ್ದ ನಾನಾ ಮಾಲಿನ್ಯಗಳನ್ನು ಪರಿಹರಿಸಿ, ಪಂಥೋಪಪಂಥಗಳಾಗಿ ಗುಂಪು ಗುಂಪುಗಳಾಗಿ, ಜಾತಿ ಜಾತಿಗಳಾಗಿ ಹರಿದು ಹೋಗಿದ್ದ ಜನರನ್ನು ಒಗ್ಗೂಡಿಸಿ, ಅವರೊಳಗೆ ಸಾಮರಸ್ಯವನ್ನು ಕುದುರಿಸಿ, ಹೊಸ ಯುಗದ ಅವತರಣಕ್ಕೆ, ಹೊಸ ಸಂಸ್ಕೃತಿಯ ಉದಯಕ್ಕೆ ನಾಂದಿ ಹಾಡಿ ಅಮರರಾಗುತ್ತಾರೆ. ಜನರ ಕಚ್ಚಾಟಕ್ಕೆ ಹಾಗೂ ಅನೈಕ್ಯಕ್ಕೆ ಕಾರಣವಾಗಿದ್ದ ಹಲವು ಕ್ಷುದ್ರ ದೇವತೆಗಳನ್ನು ನಿರ್ನಾಮಗೊಳಿಸಿ, ಮೌಢ್ಯ ಸಂಪ್ರದಾಯಗಳನ್ನು ನಿರ್ಮೂಲನಗೊಳಿಸಿ, ಹೃದಯಗಳನ್ನೊಂದುಗೂಡಿಸುವ ಸರ್ವ ಸಮಾನತೆಯನ್ನು ಕುದುರಿಸುವ ಏಕದೇವತೋಪಾಸನೆಯನ್ನು ಎಲ್ಲೆಲ್ಲೂ ಹರಡಿ, ವೈಚಾರಿಕತೆಯ ಕಹಳೆಯನ್ನೂದುತ್ತಾರೆ. ಲೌಕಿಕ ಹಾಗೂ ಪರಮಾರ್ಥಿಗಳ ಸಾಧನೆಯಲ್ಲಿ ಇವರಿಬ್ಬರ ಮಾರ್ಗ ಬೇರೆ ಬೇರೆಯಾದರೂ, ಗುರಿ ಮಾತ್ರ ಒಂದೇ ಎಂಬುದು ನಿರ್ವಿವಾದ. ಸಕಲ ಜೀವಾವಳಿಗೆ ಲೇಸುಂಟುಮಾಡುವುದೇ ಅವರ ಸುಸ್ಪಷ್ಟ ಗುರಿ.

ಆರನೆಯ ಶತಮಾನದಲ್ಲಿ ಜನಿಸಿದ ಪ್ರವಾದಿ ಮಹಮ್ಮದರು ಲೋಕಹಿತಾರ್ಥವಾಗಿ ಸೃಷ್ಟಿಕರ್ತನ ಸಂದೇಶವನ್ನು ಹರಡಿ, ಇಸ್ಲಾಂ ಧರ್ಮವನ್ನು ಸಂಸ್ಥಾಪಿಸುತ್ತಾರೆ. ಇಸ್ಲಾಂ ಧರ್ಮದ ಮೂಲ ಕುರಾನ್(ಕುರ್ ಆನ್). ಅದು ಮುಸ್ಲೀಮರ ಧಾರ್ಮಿಕ ಗ್ರಂಥವೂ ಹೌದು, ನೀತಿಶಾಸ್ತ್ರವೂ ಹೌದು. ಅದು ಜೀವನವನ್ನು ಲೌಕಿಕ ಆಧ್ಯಾತ್ಮಿಕವೆಂದು ವಿಂಗಡಣೆ ಮಾಡುವುದಿಲ್ಲ. ಅದು ಸನ್ಯಾಸವನ್ನು





ನಂಬುವುದಿಲ್ಲ; ಲೌಕಿಕ ಸುಖವನ್ನು ನಿರಾಕರಿಸುವುದಿಲ್ಲ. ಸಾತ್ವಿಕ ಜೀವನ ಮೂಲಕ ಆತ್ಮೋನ್ನತಿಯನ್ನು ಸಾಧಿಸಬಹುದೆಂದು ಅದು ನಂಬುತ್ತದೆ. ಅದು ಪುರಾಣಗಳ ಸೀಗೆ ಮೆಳೆಯನ್ನು ಬೆಳೆಸಿಲ್ಲ, ಮನುಕುಲವನ್ನು ಗೊಂದಲದಲ್ಲಿ ಸಿಕ್ಕಿಸಿಲ್ಲ. ಅದರ ಬೋಧನೆ ಸರಳ ಹಾಗೂ ವಿವೇಕಪೂರ್ಣ. ಜಗತ್ತೊಂದು ಪರೀಕ್ಷಾ ಸ್ಥಳವೆಂದು ಅದು ಬೋಧಿಸುತ್ತದೆ. ಅದರ ಪ್ರಕಾರ ಮಾನವನಿಗೆ ಪುನರ್ಜನ್ಮವಿಲ್ಲ. ಮರಣಾನಂತರ ಅವನು ತನ್ನ ದುಷ್ಕರ್ಮ ಅಥವಾ ಸತ್ಕರ್ಮಗಳಿಗನುಗುಣವಾಗಿ ಪರಲೋಕದಲ್ಲಿ ಶಿಕ್ಷೆ ಅಥವಾ ಪ್ರತಿಫಲವನ್ನು ಪಡೆಯುತ್ತಾನೆ. ಮಾನವರ ಸರ್ವಸಮತೆ ಮತ್ತು ಸಮಾನತೆ ಅದು ಬೋಧಿಸಿರುವ ಅಪೂರ್ವ ಉಪದೇಶ. ಅಂತರ್ಬೋಧೆ ಜ್ಞಾನದ ಮೂಲವೆಂದು ಅದು ಸ್ಪಷ್ಟಪಡಿಸುತ್ತದೆ; ನಿಸರ್ಗ ಮತ್ತು ಇತಿಹಾಸ ಜ್ಞಾನದ ಇತರ ಆಕರಗಳು.

ಇಸ್ಲಾಂಧರ್ಮ ಪ್ರಾಮುಖ್ಯವಾಗಿ ಮೂರು ಸಂಗತಿಗಳನ್ನು ಅವಿಚಲ ವಿಶ್ವಾಸವಿರಿಸಿದೆ; ಏಕದೇವತೋಪಾಸನೆ (ತೌಹೀದ್), ಮಹಮ್ಮದರ ಅಂತಿಮ ಪ್ರವಾದಿತ್ವ, ಮರಣೋತ್ತರ ಸಮಯದ ನಿರ್ಣಾಯಕ ದಿನ. ಸರ್ವಜ್ಞನೂ, ನಿರಾಕಾರನೂ, ಜನನಮರಣದೂರನೂ, ಅದ್ವಿತೀಯನೂ ಆದ ಏಕೈಕ ಪ್ರಭುವೇ ಸರ್ವಶಕ್ತ, ಸೃಷ್ಟಿಕರ್ತ. ಅವನಿಗೆ ಸಮನಾದವರು ಬೇರೊಬ್ಬರಿಲ್ಲ. ಮಾನವ ಸಮೂಹದಿಂದ ಶ್ರೇಷ್ಠತಮ ವ್ಯಕ್ತಿಗಳನ್ನಾಯ್ದು, ಅವರಿಗೆ ದಿವ್ಯ ಜ್ಞಾನವನ್ನು ನೀಡಿ, ಅವರ ಮೂಲಕ ಮಾನವ ಜನಾಂಗಕ್ಕೆ ಮಾರ್ಗದರ್ಶನ ನೀಡುವವನೇ ವಿಶ್ವಪ್ರಭು. ಆ ಪ್ರಭು ಆರಿಸಿದ ಶ್ರೇಷ್ಠ ವ್ಯಕ್ತಿಗಳೇ ಪ್ರವಾದಿಗಳು; ಅವರಲ್ಲಿ ಕೊನೆಯವರೇ ಮಹಮ್ಮದರು. ಶೋಷಣೆಯ ಸಂಕೇತವಾದ ಪುರೋಹಿತಶಾಹಿಗೆ ಈ ಧರ್ಮದಲ್ಲಿ ಸ್ಥಾನವಿಲ್ಲ. ಇವಿಷ್ಟೂ ಇಸ್ಲಾಂ ಧರ್ಮದ ತಳಹದಿ ಸೂತ್ರಗಳು. ನಮಾಜು, ಝಕಾತ್ ನೀಡಿಕೆ, ಹಜ್‌ಯಾತ್ರೆ ಮತ್ತು ರಮ್‌ಜಾನ್ ಉಪವಾಸ ಪ್ರತಿಯೊಬ್ಬ ಮುಸ್ಲೀಂ ಜೀವನಾವಧಿಯಲ್ಲಿ ಕಡ್ಡಾಯವಾಗಿ ಅನುಸರಿಸಬೇಕಾದ ನಿಯಮಗಳು.

ತನ್ನಲ್ಲಿ ವಿಶ್ವಾಸವಿರುವ ಪ್ರವಾದಿಯೊಬ್ಬನಿಗೆ, ಅಂದರೆ ಸರ್ವಗುಣಸಂಪನ್ನನಾದ ವ್ಯಕ್ತಿಗೆ ಮಾತ್ರ ಅಲ್ಲಾಹ್‌ನ ವಾಣಿ ಕೇಳಿಸುತ್ತದೆ. ಪ್ರವಾದಿವರ್ಯರ ಶಿಷ್ಯರು ಪ್ರವಾದಿಗಳ ರೂಪಸ್ವರೂಪ ಚರ್ಯೆಚಾಳಿಗಳನ್ನು ದಾಖಲಿಸಿದ್ದಾರೆ; ಅವರ ಅಂಗಾಂಗಗಳ ವರ್ಣನೆಯನ್ನು ಬಿಟ್ಟು ಹೋಗಿದ್ದಾರೆ. ಅವರ ಅಂತರಂಗ ಹಾಗೂ ಬಹಿರಂಗ ಸೌಂದರ್ಯ ಒಂದಕ್ಕೊಂದು ಪೋಷಕವಾಗಿದ್ದುವು. ನಿಷ್ಕಳಂಕ ಚಾರಿತ್ರ್ಯ ಅವರ ಹುಟ್ಟುಗುಣ. ಅವರೆಂದೂ ವಿರೋಧಿಗಳನ್ನು ಶಪಿಸಿದವರಲ್ಲ; ಎಲ್ಲ ಜನರೊಡನೆ ಸಭ್ಯತನದಿಂದ ವರ್ತಿಸುತ್ತಾರೆ. ತಮ್ಮ ಸದ್ವರ್ತನೆಯಿಂದ ಕೆಡುಕನ್ನು ಗೆಲ್ಲುತ್ತಿದ್ದರು. ದ್ವೇಷ ಮಾತ್ಸರ್ಯಗಳು ಅವರ ಹತ್ತಿರ ಸುಳಿಯುತ್ತಿರಲಿಲ್ಲ. ಅಧರ್ಮವನ್ನು ತೊಡೆಯುವ ಸಲುವಾಗಿ ಜಗತ್ತಿನ ಹಿತಕ್ಕಾಗಿ ಅನಿವಾರ್ಯ ಸಂದರ್ಭದಲ್ಲಿ, ಕನಿಷ್ಠ ಪ್ರಮಾಣದ ಹಿಂಸೆಯನ್ನು ಬಳಸಿ ಯುದ್ಧವನ್ನೆಸಗುತ್ತಿದ್ದರು. ಅವರದು ಧರ್ಮಯುದ್ಧ. ತಾನು ಉದಾರವಾಗಿ ವರ್ತಿಸಿದ್ದಾದರೆ ಕಾಫಿರರೂ ಧರ್ಮಾವಲಂಬಿಗಳಾಗುತ್ತಾರೆಂಬುದು ಅವರ ಭಾವನೆ. ಅವರು ಸರ್ವಶ್ರೇಷ್ಠ ಸರ್ವಮಾನ್ಯ ವ್ಯಕ್ತಿಗಳಾಗಿದ್ದರೂ, ಸಾಮಾನ್ಯನಂತೆ ಜೀವನ ಸಾಗಿಸುತ್ತಿದ್ದರು. ಅಹಂಕಾರವೆಂದೂ ಅವರ ಹತ್ತಿರ ಸುಳಿದದ್ದಿಲ್ಲ. ಸಾಮಾನ್ಯರಂತೆ ಅವರು ಕತ್ತೆಗಳ ಮೇಲೆ ಸವಾರಿ ಮಾಡುತ್ತಿದ್ದರು. ಗುಲಾಮ ಕರೆದರೂ ಅವನ ಮನೆಗೆ ಹೋಗುತ್ತಿದ್ದರು. ದಾನ ಧರ್ಮಗಳಲ್ಲಿ ಅವರದು ಎತ್ತಿದ ಕೈ.

ದೇವತಾರಾಧನೆಯಲ್ಲಿ ಅವರು ಬಹುಕಾಲ ಕಳೆಯುತ್ತಿದ್ದರು. ಕಾಲು ಬಾತುಕೊಂಡರೂ ಲೆಕ್ಕಿಸದೆ ನಮಾಜನ್ನು ಮುಂದುವರಿಸುತ್ತಿದ್ದರು. ಸರಳತೆಯೇ ಅವರ ಜೀವನದ ಪರಮಾದರ್ಶ. ಒಂದು ಹೊದಿಕೆ ಮತ್ತು ಒಂದು ದೊರಗು ಲುಂಗಿಯಲ್ಲಿ ಅವರು ಕೊನೆಯುಸಿರೆಳೆದರು. ಅವರ ಹಾಸಿಗೆ ಚರ್ಮದ್ದು. ಜೋಳದ ರೊಟ್ಟಿಗನ್ನಾಗಲಿ, ಮಾಂಸವನ್ನಾಗಲಿ ಹೊಟ್ಟೆ ಬಿರಿಯುಮಷ್ಟು ತಿನ್ನುತ್ತಿರಲಿಲ್ಲ. ರಾತ್ರಿ ವೇಳೆ ಸಾಮಾನ್ಯವಾಗಿ ಅವರು ಹಸಿದಿರುತ್ತಿದ್ದರು. ಖರ್ಜೂರ ತಿಂದು ನೀರು ಕುಡಿದು ಕಾಲ ಕಳೆದ ದಿನಗಳೂ ಉಂಟು. ಅಲ್ಲಾಹ್ ಕೊಟ್ಟ ಆಹಾರದಲ್ಲಿ ದೋಷ ಹುಡುಕಿ ದ್ದಾದರೆ ದೈವದ್ರೋಹವಾಗುತ್ತದೆಂದು ಅವರು ಬಗೆದಿದ್ದರು. ಅವರು ನಿಧನರಾದಾಗ ತಮ್ಮ ಕೂಪಟಿನಲ್ಲಿ ತೆರೆದಿರಿಸಿದ್ದ ಸ್ವಲ್ಪ ಜೋಳವನ್ನು ಬಿಟ್ಟರೆ ಅವರ ಬಳಿ ಬೇರಾವ ವಸ್ತುವೂ ಇರಲಿಲ್ಲ. ಅವರೆಂದೂ ಧನವನ್ನಾಗಲಿ ವಸ್ತುಗಳನ್ನಾಗಲಿ ಸಂಗ್ರಹಿಸಿಡುತ್ತಿರಲಿಲ್ಲ.

*

# ಭಂಡಾರ ಮತ್ತು ಬಸವಣ್ಣ

– ಡಾ|| ಎಂ.ಎಂ. ಕಲಬುರ್ಗಿ *

ಪ್ರಾಚೀನ ಭಾರತೀಯರ ಪರಿಕಲ್ಪನೆಯಲ್ಲಿ ಒಂದು ಭೂಪ್ರದೇಶವು ರಾಜ್ಯವೆನಿಸಿಕೊಳ್ಳಬೇಕಾದರೆ ರಾಜ, ಮಂತ್ರಿ, ಸೈನ್ಯ, ಪ್ರಜೆ, ಕೋಟೆ, ಭಂಡಾರ, ಪ್ರದೇಶ – ಈ ಏಳು ಅಂಗಗಳು ಅವಶ್ಯವೆನಿಸಿದ್ದವು. ರಾಜ್ಯದ **'ಸಪ್ತಾಂಗ'**ವೆನಿಸುವ ಇವುಗಳಲ್ಲಿ ಭಂಡಾರವು ಮಿಕ್ಕವುಗಳನ್ನು ಪೋಷಿಸುವ ಜೀವಶಕ್ತಿಯಾಗಿದ್ದುದರಿಂದ, ಅದು ಮಹತ್ವಪೂರ್ಣ ಅಂಗವೆನಿಸಿದ್ದಿತು. ಆಗಾಗ ಯುದ್ಧದಲ್ಲಿ ಅಪಹರಿಸಿ ತಂದ ಸಂಪತ್ತು, ಅಧೀನ ರಾಜರಿಂದ ಪ್ರತಿವರ್ಷ ಬರುವ ಕಪ್ಪಕಾಣಿಕೆ, ಸ್ಥಳೀಯ ಮೂಲಗಳಿಂದ ನಿರಂತರ ಬರುವ ಸುಂಕ–ಇತ್ಯಾದಿಗಳಿಂದ ಬೆಳೆದ ಸಂಪತ್ತಿನ ಮೊತ್ತವೇ ಭಂಡಾರ. ಇದನ್ನು ನೋಡಿ ಕೊಳ್ಳುವವ ಭಂಡಾರಿ ಅಥವಾ ಸಚಿವ (Finance Minister)

ಬಸವಣ್ಣನವರು ಬಿಜ್ಜಳನಲ್ಲಿ ಸಚಿವರಾಗಿದ್ದುದು ಸರ್ವಶ್ರುತ. ಪ್ರಾಚೀನ ಕಾವ್ಯಗಳು ಕೆಲವೊಮ್ಮೆ ಈ ಹುದ್ದೆಯನ್ನು ವೈಭವೀಕರಿಸಿ ಬರೆದಿದ್ದರೂ ***'ಭಂಡಾರಿ ಬಸವಂ ದಂಡನಾಥ ಶ್ರೀಕೇತ್ರಂ'*** ಎಂದು ಮುಂತಾಗಿ ಪದೇ ಪದೇ ಉಲ್ಲೇಖಿಸುವುದರಿಂದಲೂ, ಬಸವಣ್ಣನ ವಿಷಯ ಬಂದಾಗಲೆಲ್ಲಾ ಭಂಡಾರದ ಪ್ರಸ್ತಾಪ ಮಾಡುವುದರಿಂದಲೂ, ನಮ್ಮ ಕವಿಗಳ ಅಭಿಪ್ರಾಯದಲ್ಲಿ ಅವರು ಭಂಡಾರದ ಮಂತ್ರಿಗಳಾಗಿದ್ದರೆಂದೇ ತೋರುತ್ತದೆ. ***'ಕೂಡಲಸಂಗನ ಮಹಾಮನೆಯಲ್ಲಿ ಧರ್ಮಸಂತಾನ ಭಂಡಾರಿ ಬಸವಣ್ಣನು', 'ಬಿಜ್ಜಳನ ಭಂಡಾರವೆನಗೇಕಯ್ಯಾ?'*** ಎಂಬಂಥ ವಚನಗಳ ಮೂಲಕವೂ ತಾವು ಭಂಡಾರಿಯೆಂದು ಬಸವಣ್ಣನವರು ಸ್ಪಷ್ಟಪಡಿಸುತ್ತಾರೆ. ಆದುದರಿಂದ ಅವರು ಬಿಜ್ಜಳನಲ್ಲಿ ಭಂಡಾರ ಮಂತ್ರಿಯಾಗಿದ್ದರೆಂದೇ ಇಟ್ಟು ಕೊಳ್ಳಬೇಕಾಗುತ್ತದೆ.

ಪ್ರಾಚೀನ ಕಾಲದಲ್ಲಿ **'ರಾಜ್ಯಭಂಡಾರ'**ವೆಂಬುದು **'ರಾಜನ ಭಂಡಾರ'** ವೆಂದೇ ಜನತೆಯ ನಂಬುಗೆಯಾಗಿದ್ದಿತು. ಆ ರಾಜ ಸತ್ತಾಯುಗದಲ್ಲಿ ಅದರ ವಿನಿಯೋಗದ ಹಕ್ಕು ನೇರವಾಗಿ ರಾಜನ ಸ್ವಾಮಿತ್ವಕ್ಕೆ ಒಳಪಟ್ಟಿದ್ದಿತು. ಅಂದರೆ ಕೇಂದ್ರದಲ್ಲಿ ಚಕ್ರವರ್ತಿಯ, ಮಂಡಲದಲ್ಲಿ ಮಾಂಡಲಿಕನ, ನಾಡಿನಲ್ಲಿ ನಾಳ್ಗಾವುಂಡನ– ಹೀಗೆ ಆಳುವ ವರ್ಗದ ಖಾಸಗಿ ಆಸ್ತಿಯಂತೆ ಅದು ವಿನಿಯೋಗವಾಗುತ್ತಲಿದ್ದಿತು.

ಇವರನ್ನು ಬಿಟ್ಟರೆ ಈ ಭಂಡಾರ ಮುಖ್ಯವಾಗಿ ವಿನಿಯೋಗವಾಗುತ್ತಿದ್ದುದು, ಯಾವುದೇ ಮತದ ಪುರೋಹಿತವರ್ಗಕ್ಕೆ. ದೇವಾಲಯಗಳ ನಿರ್ಮಾಣ–ನಿರ್ವಹಣೆ, ಅಗ್ರಹಾರಗಳ ಪೋಷಣೆ, ಧಾರ್ಮಿಕ ಸಂದರ್ಭದ ದಾನದಕ್ಷಿಣೆ– ಇತ್ಯಾದಿ ಹೆಸರಿನಿಂದ ಈ ಭಂಡಾರ ವ್ಯಯವಾಗುತ್ತಲಿದ್ದಿತು. ಮಧ್ಯಕಾಲೀನ ಕರ್ನಾಟಕದ ದೇವಾಲಯ, ಅಗ್ರಹಾರಗಳಿಗೆ ಸಂಬಂಧಿಸಿದ ದಾಖಲೆಗಳನ್ನು ನೋಡಿದರೆ ಈ ಮಾತು ಮನವರಿಕೆಯಾಗುತ್ತದೆ.

ಈ ಬಗೆಯಲ್ಲಿ ಭಂಡಾರ ವಿನಿಮಯವಾಗುವ ಅಂದರೆ ದುರ್ವಿನಿಯೋಗವಾಗುವ ಉಸ್ತುವಾರಿ ನೋಡಿಕೊಳ್ಳುವವ ಅಂದಿನ ಭಂಡಾರಿ, ಭಂಡಾರದ ಈ ದುರ್ವಿನಿಯೋಗವೇ ಸದ್ವಿನಿಯೋಗವೆಂಬ ಭಾವನೆ ಅಂದಿನ ರಾಜಕೀಯ–ಸಾಮಾಜಿಕ ವ್ಯಕ್ತಿಗಳದಾಗಿದ್ದಿತು. ಇಂಥ ಕೆಟ್ಟ ಕಾಲದಲ್ಲಿ ಬಸವಣ್ಣ ಭಂಡಾರದ ಮಂತ್ರಿಯಾಗಿ ಬಂದ, ಭ್ರಷ್ಟವ್ಯವಸ್ಥೆಯಲ್ಲಿ ಒಬ್ಬ ಶುದ್ಧವ್ಯಕ್ತಿ ಪ್ರವೇಶ ಮಾಡಿದ, ತತ್ತ್ವವಾದಿಯಾದ ಅವನು ಈಗ ಹಾಕಿಕೊಂಡ ಮೊದಲ ಪ್ರಶ್ನೆಯೆಂದರೆ ಈ ಭಂಡಾರ ಯಾರದು? ಇದರ ಮೇಲೆ ಇರುವುದು ಯಾರ ಹಕ್ಕು?

ಈ ಪ್ರಶ್ನೆಗೆ ವೀರಶೈವ ಪುರಾಣಗಳಲ್ಲಿ, ಅದರಲ್ಲಿಯೂ 'ಬಸವರಾಜದೇವರ ರಗಳೆ'ಯಲ್ಲಿ ಉತ್ತರ ಸಿಗುವಂತೆ ತೋರುತ್ತದೆ. ಬಸವಣ್ಣ ಕಲಚುರಿಗಳ ಭಂಡಾರದ ಕರಣಿಕನಾಗುತ್ತಾನೆ. ಚಾಲುಕ್ಯರ ಕಾಲದಿಂದಲೂ ಬೆಳೆಯುತ್ತ ಬಂದ ಶ್ರೀಮಂತ ಭಂಡಾರವದು. ಮೊದಲ ದಿನ ಭಂಡಾರದ ಬಾಗಿಲನ್ನು ತೆರೆಯುತ್ತಲೇ,

*ಅಯ್ಯಲಾ! ಇಂತಪ್ಪನರ್ಘ್ಯಮಂ ಭಕ್ತರ್ಗೆ*
*ಕಯ್ಯಾರೆ ಕುಡಲಿಲ್ಲ ಪರಶಿವನ ಭಕ್ತರ್ಗೆ*

*ಕಾಕಭಾಜನಮಾಗಿ ಪೋಗುತಿರ್ದಪುದಕಟ*
*ಲೋಕಾಯತರ್ಗೆ ಸಾರುತಿರ್ದಪುದಕಟ*

ಎಂದು ನುಡಿಯುತ್ತಾನೆ. 'ಅಯ್ಯಲಾ! ಇಂತಪ್ಪ ಅನರ್ಘ್ಯ' ಎಂಬ ಮಾತು ಈ ಭಂಡಾರ ಬಹುದೊಡ್ಡದಾಗಿದುದನ್ನು ಸೂಚಿಸುತ್ತದೆ. 'ಕಾಕಭಜನಮಾಗಿ ಹೋಗುತಿರ್ದಪುದಕಟ' ಎಂಬುದು ಅಂದಿನ ಅದರ ಅಪವ್ಯಯದ ಅಧಿಕ್ಯವನ್ನು ಧ್ವನಿಸುತ್ತದೆ. ಈ ಅಪವ್ಯಯವೆಂಬುದು ಮೇಲೆ ಹೇಳಿದ ರಾಜಶಾಹಿ, ಪುರೋಹಿತಶಾಹಿ ಮೊದಲಾದವರು ಮನಬಂದಂತೆ ಭೋಗಿಸುವುದೇ ಆಗಿದೆ. ಹರಿಹರನ ದೃಷ್ಟಿಯಲ್ಲಿ ಇವರು 'ಲೋಕಾಯತರು' ಅಂದರೆ ಪದಾರ್ಥವಾದಿ (Materialistic people) ಗಳು, ಭವಿಗಳು, ಇಂಥವರು ಭಂಡಾರದ ವಾರಸುದಾರರಲ್ಲ. 'ಲಿಂಗಾಯತರರು' (Non-Materialistic people) ಅಂದರೆ ಪ್ರಸಾದವಾದಿಗಳು, ಭಕ್ತರು ಮಾತ್ರ ಇದರ ನಿಜವಾದ ವಾರಸುದಾರರು. ಒಟ್ಟಿನಲ್ಲಿ ಪದಾರ್ಥವಾದಿಯು ರಾಜನೇ ಆಗಿದ್ದರೂ ಭಂಡಾರ ಅವನ ಸೊತ್ತಲ್ಲ, ಪ್ರಸಾದವಾದಿಯು ಬಡಪ್ರಜೆಯಾಗಿದ್ದರೂ ಭಂಡಾರ ಅವರ ಸೊತ್ತು. ಇದು ಬಸವ ಸಿದ್ಧಾಂತ. ಹೀಗಾಗಿ ಹರಿಹರನ ಬಸವಣ್ಣ ಭಂಡಾರವನ್ನು ಕುರಿತು ***'ಭಕ್ತನೊಡವೆ ಕೆಡಲಾಗದು'*** ಎನ್ನುತ್ತಾನೆ. ಭಕ್ತರಿಗೆ ಅದನ್ನು ವಿನಿಯೋಗಿಸುವಾಗ ***'ನಿಮ್ಮರ್ಥಮಂ ನಿಮಗೆ ತೊತ್ತುಕೆಲಸಂ ಮಾಡಿ ನೀಡುವ ಕಿಂಕರಂ'*** ತಾನೆಂದು ಹೇಳಿಕೊಳ್ಳುತ್ತಾನೆ. ಭಂಡಾರ ಭಕ್ತರಿಗೆ ವಿನಿಯೋಗವಾಗುವುದನ್ನು ಬಿಜ್ಜಳ ಪ್ರತಿಭಟಿಸಲು ***'ಶಿವಭಕ್ತರ್ ನಿನ್ನೊಡವೆಯಾಸೆ ಮಾಳ್ಪರೆ? ತಮ್ಮೊಡನೆಯಂ ತಾವೆ ಕೊಂಡರೆ'*** ಎನ್ನುತ್ತ ಭಂಡಾರ ಬಿಜ್ಜಳನದಲ್ಲ, ಭಕ್ತರದು ಎಂದು ಸೂಚಿಸುತ್ತಾನೆ.

***'ಭಂಡಾರದ ಒಡೆಯ ರಾಜನಲ್ಲ ಭಕ್ತರು'*** ಎಂಬ ತತ್ತ್ವದ ಬಸವಣ್ಣನವರು ಅಧಿಕಾರ ವಹಿಸಿಕೊಂಡ ಬಳಿಕ, ಈ ಕಡೆ ಮೊದಲಿನಂತೆ ಮುಕ್ತವಾಗಿ ಭಂಡಾರವನ್ನು ಬಳಸುವುದು ಬಿಜ್ಜಳನಿಗೂ ದುಸ್ತರವಾಗಿ, ಅವನ ಮನಸ್ಸಿಗೆ ಕಿರಿಕಿರಿಯಾಗಿರಬೇಕು. ಆ ಕಡೆ ಅಗ್ರಹಾರದ ನಿರ್ಮಾಣ, ಪುರೋಹಿತರ ದಾನಗಳ ಹೆಸರಿನಲ್ಲಿ ಹಣಹರಿದು ಹೋಗುವುದೂ ನಿಂತ ಕಾರಣ, ಅದನ್ನು ಭೋಗಿಸುತ್ತಿದ್ದ ಪುರೋಹಿತ ವರ್ಗವೂ ಬಸವಣ್ಣನ ಮೇಲೆ ಕ್ರೋಧತಪ್ತರಾಗಿರಬೇಕು.

ಹೀಗೆ ಒಂದು ಕಡೆ ಭಂಡಾರವನ್ನು ಭವಿಗಳು ಭೋಗಿಸುವುದಕ್ಕೆ ನಿರ್ಬಂಧ ಹಾಕಿದ ಬಸವಣ್ಣ, ಇನ್ನೊಂದು ಕಡೆ ***'ಆನೆ ಭಂಡಾರ ಲಾಯದ ಕುದುರೆ ಬೇಡುವರಿಲ್ಲದೆ ಬಡವನಾದೆನಯ್ಯಾ'*** ಎಂಬ ಭಾವದಿಂದ ಅದನ್ನು ಭಕ್ತರಿಗೆ ವಿನಿಯೋಗಿಸಲು ಪ್ರಾರಂಭಮಾಡುತ್ತಾನೆ. 'ಭಕ್ತ' ಪದಕ್ಕೆ ಇಲ್ಲಿ ಪರ್ಯಾಯವಾಗಿ 'ಜಂಗಮ'ಎಂಬುದು ಬಳಕೆಯಾಗಿರುವುದರಿಂದಲೂ, 'ಜಂಗಮದಲ್ಲಿ ಜಾತಿಯನರಸೆ' ಎಂಬ ಮಾತಿನಿಂದಲೂ ಇವರು ಇಂದಿನ ಜಾತಿನಿಷ್ಠ ಜಂಗಮರಲ್ಲ. ಅದೇ ಆಗ ರೂಪುಗೊಳ್ಳುತ್ತಲಿದ್ದ ಗುಣನಿಷ್ಠ ಜನಸಮುದಾಯವೆಂದು ಸ್ಪಷ್ಟವಾಗುತ್ತದೆ.

ಬಸವಣ್ಣನವರ ಅಂದಿನ ನೂತನ ಸಮಾಜದಲ್ಲಿ ದುಡಿಮೆಗೆ ಮಹತ್ವವಿದ್ದಿತು. ಆದರೆ ಪುರಾಣಗಳಲ್ಲಿ ದುಡಿಮೆಯ ಪ್ರಸ್ತಾಪ ಬರದೆ ಕೇವಲ ಭಂಡಾರ ವಿನಿಯೋಗದ ವಿಷಯ ಬರುತ್ತದೆ. ಇದಕ್ಕೆ ಸಮಾಧಾನ ವಿಷ್ಟು; ಭಂಡಾರರ ಸಂಪತ್ತು ಮೂಲತಃ ಜನ ಸಮುದಾಯದ ಶ್ರಮದಿಂದಲೇ ಶೇಖರಿಸಲ್ಪಟ್ಟಿರುತ್ತದೆ. ತಮಗರಿಯದಂತೆ ರಾಜ್ಯಭಂಡಾರ ಬೆಳೆಸಿದ ವರ್ಗವಿದು. ಅವರಿಗೆ ದುಡಿಮೆಯನ್ನು ಹೇಳುವ ಮೊದಲು, ಅವರು ಬದುಕಲು ಅವಶ್ಯವಿರುವ ವಸ್ತ್ರ, ಅನ್ನ, ವಸತಿಗಳನ್ನು ಪೂರೈಸಿಕೊಡುವುದು ಸರಕಾರದ ಪ್ರಥಮ ಕರ್ತವ್ಯ. ಈ ಕರ್ತವ್ಯವನ್ನು ಪೂರೈಸುವ ರೀತಿಯಲ್ಲಿ ಬಸವಣ್ಣ ಪ್ರಾರಂಭದ ಹಂತದಲ್ಲಿ ಹೀಗೆ ಹಣವನ್ನು ಅವರಿಗೆ ವಿನಿಯೋಗಿಸಿದಂತೆ ಕಾಣುತ್ತದೆ. ಈ ಘಟನೆ ಸ್ಥೂಲನೋಟಕ್ಕೆ ಆರೋಪ ಹೊರಿಸುವವರಿಗೆ ಅಪವ್ಯಯವೆಂದು ತೋರುವುದು ಇನ್ನೂ ಸಹಜ. ಅಂಥವರು ಮಾಡಿದ ಅಪಪ್ರಚಾರ ಸಮಾಜದಲ್ಲಿ ದಟ್ಟವಾಗಿ ಹರಡಿ, ಅದು ಬಸವಣ್ಣನ ಕಿವಿಗೂ ಮುಟ್ಟಿದಂತಿದೆ. ಅವನ ವಚನಗಳಲ್ಲಿ ರಾಜಕೀಯ ಕ್ಷೇತ್ರದ ಇತರ ವಿಷಯಗಳಿಗೆ ಬದಲು, ಭಂಡಾರದ ಪ್ರಸ್ತಾಪವೇ ಬಹಳ ಸಲ ಬರುತ್ತದೆ. ಅಲ್ಲಿ ಒಮ್ಮೆ ಸ್ವಗತವಾಗಿ ತನ್ನನ್ನು ತಾನೇ ಸಂತೈಸಿಕೊಳ್ಳುವ ಧ್ವನಿ, ಮತ್ತೊಮ್ಮೆ ಈ ಸುಳ್ಳು ಆರೋಪವನ್ನು ವ್ಯಕ್ತವಾಗಿ ತಳ್ಳಿಹಾಕುವ ಧ್ವನಿ, ಇನ್ನೊಮ್ಮೆ ಬಿಜ್ಜಳ ತನ್ನ ಮೇಲೆ ಕ್ರಮ ಕೈಗೊಳ್ಳಲು ಸಿದ್ಧನಾಗಿದ್ದಾನೆ; ಅದಕ್ಕೆ

* ವಿಶ್ರಾಂತ ಕುಲಪತಿಗಳು, 'ಸೌಜನ್ಯ', ೯ನೇ ಕ್ರಾಸ್, ಕಲ್ಯಾಣನಗರ, ಧಾರವಾಡ –೫೮೦ ೦೦೭.

ತಾನು ಅಂಜುವುದಿಲ್ಲವೆಂಬ ಧೀರ ಧ್ವನಿಗಳು ಕೇಳಿಸುತ್ತವೆ.

*ತನುವ ಬಂದಲೆವರಯ್ಯಾ, ಎನ್ನ ಮನವ ಬಂದು*
*ನೋಡುವರಯ್ಯಾ,*
*ಎನ್ನ ಧನವ ಬಂದು ಸೂರೆಗೊಂಬರಯ್ಯಾ,*
*ಜಂಗಮವನವರತ,*
*ಕೂಡಲಸಂಗಮದೇವಾ*
*ನಿಮ್ಮ ಬಯಕೆಯ ಭಂಡಾರಕ್ಕೆ ನಾನು ಶುದ್ಧನಯ್ಯಾ.*

'ಇಲ್ಲಿ ಕೂಡಲಸಂಗಮದೇವಾ, ಭಂಡಾರಕ್ಕೆ ನಾನು ಶುದ್ಧನಯ್ಯಾ' ಎಂದು, ಸ್ವಗತವಾಗಿ ತನ್ನನ್ನೇ ತಾನು ಸಂತೈಸಿ ಕೊಳ್ಳುತ್ತಾನೆ. ದೇವರ ಸಾಕ್ಷಿಯಾಗಿ ಮನಸ್ಸಿನಲ್ಲಿಯೇ ಮಾತ ನಾಡಿಕೊಳ್ಳುತ್ತಾನೆ. ಬಹುಶಃ ಈ ಆರೋಪದ ವಾತಾವರಣ ಇನ್ನೂ ಗಂಭೀರವಾಗಿರಬಹುದಾದ ಪ್ರಸಂಗದಲ್ಲಿ

*ಊರಮುಂದೆ ಹಾಲಹಳ್ಳ ಹರಿವುತ್ತಿರಲು*
*ಒರೆಯಾವಿನ ಬೆನ್ನಲಿ ಹರಿಯಲದೇಕಯ್ಯಾ?*
*ಲಜ್ಜೆಗೆಡಲೇಕೆ? ನಾಣುಗೆಡಲೇಕೆ ?*
*ಕೂಡಲ ಸಂಗದೇವರುಳ್ಳನ್ನಕ್ಕ*
*ಬಿಜ್ಜಳನ ಭಂಡಾರವೇನಗೇಕಯ್ಯಾ?*

ಎಂಬ ವಚನದ ಮೂಲಕ ಸ್ವಗತವನ್ನು ಬಿಟ್ಟು, ಬಹಿರಂಗವಾಗಿ ಈ ಸುಳ್ಳು ಆರೋಪವನ್ನು ತಳ್ಳಿಹಾಕುತ್ತಾನೆ. ಬಹುಶಃ ಬಿಜ್ಜಳ ಕ್ರಮ ಕೈಗೊಳ್ಳುವ ಸಿದ್ಧತೆಯಲ್ಲಿರುವಾಗ

*ಆನೆ ಅಂಕುಶಕ್ಕಂಜುವುದೇ ಅಯ್ಯಾ*
*ಮಾಣದೆ ಸಿಂಹದ ನಖವೆಂದು ಅಂಜುವುದಲ್ಲದೆ?*
*ಆನೀ ಬಿಜ್ಜಳಂಗೆ ಅಂಜುವೆನೆ ಅಯ್ಯಾ?*
*ಕೂಡಲಸಂಗಮದೇವಾ*
*ನೀನು ಸರ್ವಜೀವ ದಯಾಪಾರಿಯಾದ ಕಾರಣ*
*ನಿನಗಂಜುವೆನಲ್ಲದೆ.*

ಎಂದು ರಾಜನ ವಿರುದ್ಧ ನಿಷ್ಠುರ-ನಿರ್ಭೀತ ನಿಲವು ತಾಳುತ್ತಾನೆ. ಹೀಗೆ ವಚನಗಳಲ್ಲಿ ಪದೇ ಪದೇ 'ಭಂಡಾರ' ಎಂಬ ಪದವನ್ನು ರಾಜನಾದ 'ಬಿಜ್ಜಳ'ನ ಹೆಸರನ್ನು ಬಳಸಿ ಮಾತನಾಡುವುದೂ-ಖಂಡಿಸುವುದೂ ನಡೆದಿರುವುದನ್ನು ನೋಡಿದರೆ, ಕೆಲವರು ಬಸವಣ್ಣನನ್ನು ಭಂಡಾರ ಅಪವ್ಯಯದ ಆರೋಪಕ್ಕೆ ಗುರಿಮಾಡಿದ್ದರೆಂದು ವಿದಿತವಾಗುತ್ತದೆ. ಈ ಆರೋಪ ಕಾರಣವಾಗಿ ನ್ಯಾಯ ವಿಚಾರಣೆಯೂ ನಡೆಯಿತೆಂದು 'ಬಸವರಾಜದೇವರ ರಗಳೆ'ಯಲ್ಲಿ ಬಸವ ಪುರಾಣ-ಸಿಂಗಿರಾಜ ಪುರಾಣಗಳ ಪೆಟ್ಟಿಗೆ ಪವಾಡ ಸಂದರ್ಭ ಗಳಲ್ಲಿ ಸೂಚಿತವಾಗಿದೆ.

ಒಟ್ಟಿನಲ್ಲಿ ಬಿಜ್ಜಳ ಬಸವಣ್ಣನವರ ಮಧ್ಯ ಮನಸ್ತಾಪ ಬೆಳೆಯಲು ಧಾರ್ಮಿಕ-ಸಾಮಾಜಿಕ ಅಂಶಗಳು ಕಾರಣ ವಾಗಿರಬಹುದಾದರೂ 'ರಾಜ್ಯಭಂಡಾರ'ದ ಒಡೆತನದ ಪ್ರಶ್ನೆಯೇ ಮುಖ್ಯಕಾರಣವಾಗಿರಬೇಕು. ಏಕೆಂದರೆ ಧಾರ್ಮಿಕ ತತ್ತ್ವಗಳ ಪ್ರತಿಪಾದನೆ-ಪ್ರಸಾರಗಳು ಬಿಜ್ಜಳನಿಗೆ ಅಪಾಯ ಕಾರಿಯೇನಲ್ಲ. ಮೇಲಾಗಿ ಅವನೂ ಶೈವಮತೀಯ ನಾಗಿದ್ದಾನೆ, ನೂತನ ಸಾಮಾಜಿಕ ಸಿದ್ಧಾಂತಗಳಲ್ಲಿ ಸ್ತ್ರೀ-ಪುರುಷರೆಂಬ 'ಲಿಂಗಭೇದ ನಿರಾಕರಣೆ'ಯಿಂದಲೂ ಬಿಜ್ಜಳನಿಗೆ ಅಪಾಯ ವಿಲ್ಲ. 'ವರ್ಣಭೇದ ನಿರಾಕರಣೆ'ಯಿಂದ ಪುರೋಹಿತರ ಪ್ರತಿಷ್ಠೆಗೆ ಧಕ್ಕೆ ಬರಬಹುದಾಗಿದೆಯೇ ಹೊರತು ಅದು ಬಿಜ್ಜಳನಿಗೆ ನೇರವಾಗಿ ಸಂಬಂಧಿಸಿದುದಲ್ಲ. ವರ್ಗಭೇದ ನಿರಾಕರಣೆ, ಅದರಲ್ಲಿಯೂ ಭಂಡಾರ ಮೇಲಿನ ರಾಜನ ಹಕ್ಕನ್ನು ಪ್ರಶ್ನಿಸುವ ವರ್ಗಭೇದ ನಿರಾಕರಣೆ ಮಾತ್ರ ನೇರ ವಾಗಿ ಬಿಜ್ಜಳನಿಗೆ ಸಂಬಂಧಿಸಿದ್ದು, ಅದು ಅವನ ಆಡಳಿತದ ಬೇರನ್ನೇ ಅಲುಗಿಸುವ ಭಯವನ್ನು ಹುಟ್ಟಿಸಿ, ಅವನಲ್ಲಿ ಮನಸ್ತಾಪದ ಕಿಡಿ ಹೊತ್ತುವಂತೆ ಮಾಡಿರಬೇಕು. ಇದಕ್ಕೆ 'ವರ್ಣಭೇದ ನಿರಾಕರಣೆ' ಇತ್ಯಾದಿ ಬೇರೆ ಅಂಶಗಳೂ ಸೇರಿ, ಕಿಡಿ ಕಿಚ್ಚಾಗಿ ಬೆಳೆದಿರಬೇಕು.

ಹರಳಯ್ಯ-ಮಧುವಯ್ಯನವರ ಮಕ್ಕಳ ಮದುವೆ ಬಸವಣ್ಣನವರ ಅವಸರ ನಿರ್ಣಯ, ಈ ರಕ್ತ ಸಂಬಂಧ ಕಾರಣವಾಗಿ ಬಸವಣ್ಣ-ಬಿಜ್ಜಳರಲ್ಲಿ ಘರ್ಷಣೆಯ ಪ್ರಾರಂಭ-ಮುಕ್ತಾಯ ಘಟಿಸಿತೆಂದು ಸಾಮಾನ್ಯವಾಗಿ ಭಾವಿಸಲಾಗುತ್ತದೆ. ಅಂದರೆ 'ವರ್ಣಭೇದ ನಿರಾಕರಣೆ'ಯೇ ಕಲ್ಯಾಣಕ್ರಾಂತಿಗೆ ಕಾರಣವಾಯಿತೆಂದೇ ಹೇಳಲಾಗುತ್ತದೆ. ಆದರೆ ಇವರಿಬ್ಬರ ನಡುವಿನ ಮನಸ್ತಾಪಕ್ಕೆ ಈ ಮದುವೆ ಒಂದು ನೆವವಾಗಿದ್ದು, ಇದರ ಹಿಂದೆ ಬಸವಣ್ಣನವರ ಜನಪರವಾದ ಹೊಸ 'ಅರ್ಥನೀತಿ'ಯೇ ಬಹಳಷ್ಟು ಕೆಲಸಮಾಡಿದೆಯೆಂದು ಭಾವಿಸುವುದು ಹೆಚ್ಚು ವಾಸ್ತವವೆನಿಸುತ್ತದೆ. ದುರ್ದೈವದ ಸಂಗತಿಯೆಂದರೆ ವರ್ಗ ಸಂಘರ್ಷವನ್ನು ಹಿಂದೆದೂಡಿ, ವರ್ಣಸಂಕರವು ಹೆಚ್ಚು ಪ್ರಚಾರ ಪಡೆಯಿತು. ತಲೆಯಲ್ಲಿ 'ಅರ್ಥಿಕ' ಹೊಸ ವಿಚಾರ, ಕೈಯಲ್ಲಿ 'ರಾಜ್ಯಭಂಡಾರ'ದ





ಅಧಿಕಾರ, ಇವುಗಳಿಂದಾಗಿ ಬಸವಣ್ಣನವರಿಗೆ ವಿಚಾರವನ್ನು ಆಚಾರದಲ್ಲಿ ತರಲು ಒಳ್ಳೆಯ ಅವಕಾಶ ಪ್ರಾಪ್ತ ವಾಯಿತು. 'The history of all hittherto existing society is the history of class struggles' ಎಂಬ ಮಾರ್ಕ್ಸ್‌ನ ಮಾತನ್ನು ಬಸವಣ್ಣ ಎಂದೋ ಅರಿತಿದ್ದಾನೆ, ಆಚರಿಸಿದ್ದಾನೆ-ಎಂದು ಇದರಿಂದ ವ್ಯಕ್ತವಾಗುತ್ತದೆ. ***'ಆವನೇಸ್ವಾದರೇನು? ಹೇವವಿಲ್ಲದುಸ್ಸೆಬಹುದೇ?'*** ಎನ್ನುವ ಬಸವಣ್ಣ 'ಅರ್ಥ'ದ ಮಹತ್ವ ತಿಳಿದ ವ್ಯಕ್ತಿಯಾಗಿದ್ದ ಆದುದರಿಂದ ಬಿಜ್ಜಳ ಬಸವಣ್ಣ ಇವರ ನಡುವಿನ ಘರ್ಷಣೆಗೆ ಮುಖ್ಯಕಾರಣ **'ಬಸವಣ್ಣನ ಆರ್ಥಿಕ ನೀತಿ'** ಯೇ ಆಗಿದೆಯೆಂದು ಹೇಳುವುದು ನ್ಯಾಯಸಮ್ಮತ.

ಬಹುಶಃ ಬಸವಣ್ಣ ಭಂಡಾರದ ಮಂತ್ರಿಯಾಗದೆ ಬೇರೆ ಮಂತ್ರಿಯಾಗಿದ್ದರೆ, ಇಷ್ಟು ಬೇಗ ಅವರಿಬ್ಬರಲ್ಲಿ ಮನಸ್ತಾಪ ಉದ್ಭವಿಸುತ್ತಿರಲಿಲ್ಲ, ಇಷ್ಟು ದೀರ್ಘಕ್ಕೆ ಹೋಗು ತ್ತಿರಲಿಲ್ಲ. ಬಸವಣ್ಣನನ್ನು ಭಂಡಾರಿಯನ್ನಾಗಿ ಮಾಡುವ ಮೂಲಕ ಬಿಜ್ಜಳನ ಪರಿಸ್ಥಿತಿ, ಹಗ್ಗಕೊಟ್ಟು ಕೈ ಕಟ್ಟಿಸಿ ಕೊಂಡಂತಾಗಿರಬೇಕು. ಹೀಗಾಗಿ ಶರಣರ ಚಳುವಳಿ ಕೇವಲ ಸಮಾಜೋ-ಧಾರ್ಮಿಕವಲ್ಲ. ಅದು ಆರ್ಥಿಕ ಚಳುವಳಿಯೂ ಆಗಿದ್ದು, ಆ ಮೂಲಕ ರಾಜಕೀಯ ಚಳುವಳಿಯೂ ಆಗಿದೆ. ಆದುದರಿಂದ ***'ಲಿಂಗಾಯತ ಚಳುವಳಿ ಮುಖ್ಯವಾಗಿ ಸಮಾಜೋ-ಧಾರ್ಮಿಕ ಸ್ವರೂಪದ್ದು, ಸಮಾಜೋ ಆರ್ಥಿಕ ಸ್ವರೂಪದ್ದು ಅಲ್ಲ'*** ಎಂಬಂಥ ವಿದ್ವಾಂಸರ ಮಾತುಗಳನ್ನು ಪುನಃ ಪರಿಶೀಲಿಸಬೇಕಾಗುತ್ತದೆ.

*

*****************************************************

## ಹಡಪದ ಅಪ್ಪಣ್ಣ ವಚನಗಳು

*ಹಾಲ ಸಾಗರದೊಳು ತೇಲಾಡುತ್ತಿದ್ದು,*
*ಚಿಲುಮೆಯ ನೀರಿಗೆ ಹರಿದಾಡಬೇಡ*
*ಮೇಲುಗಿರಿ ಶಿಖರದ ಪಶ್ಚಿಮದ ತೇಲಾಡುತಿರೆ*
*ಬಸವಪ್ರಿಯ ಕೂಡಲಚೆನ್ನಬಸವಣ್ಣ*

* * *

*ಜಂಗಮ ಜಂಗಮವೆಂದ ನುಡಿದು*
*ಜಗದ ಹಂಗಿಗರಾಗಿ ಇರಲಾರದು*
*ಜಗದ ಕರ್ತನ ಕೈಯಲ್ಲಿ ಹಿಡಿದುಕೊಂಡು*
*ಜಂಗುಳಿಗಳ ಬಾಗಿಲ ಕಾಯಲಾಗದು*
*ಜಂಗಮ ಸುಳುಹು ಎಂತಿರಬೇಕೆಂದರೆ,*
*ತನ್ನ ನಂಬಿದ ಸಜ್ಜನ ಸದ್ಭಕ್ತರಲ್ಲಿಗೆ ಲಿಂಗವಾಗಿ ಗಮಿಸಿ*
*ತಾ ಕಂಡ ಲಿಂಗಾಗವನು ಅಲ್ಲಿಯೇ ನಿಕ್ಷೇಪಿಸಿ,*
*ತಾ ನಿರ್ಗಮನಿಯಾಗಿ ಸುಳಿಯಬಲ್ಲರೆ ಜಂಗಮ*
*ಲಿಂಗವದು*
*ಇಂತಲ್ಲದೆ ಕಂಡವರ ಕಾಡಿ ಬೇಡಿ*
*ಕೊಟ್ಟರೆ ಕೊಂಡಾಡಿ ಕೊಡದಿದ್ದರೆ ಜರಿದು*
*ತಾನು ನಿರೋಧಕ್ಕೆ ಗುರಿಯಾಗಿ*
*ನೋವುತ್ತ ಬೇವುತ್ತ ಧಾವತಿಗೊಂಬ ಗಾವಿಲರ*
*ಎಂತು ಜಂಗಮವೆಂಬೆ*
*ಬಸವಪ್ರಿಯ ಕೂಡಲಚನ್ನಬಸವಣ್ಣಾ ?*

* * *

*ತನ್ನ ಮನಯನರಿಯದೆ ತವರ ಮನೆಗೆ ಹಾರುವ*
*ಹೆಣ್ಣಿನಂತೆ*
*ಭಿನ್ನವಿಟ್ಟ ನೋಡಿಹೆನೆಂದು ನಿಮ್ಮನರಿಯದೆ ಕೆಟ್ಟಿತು*
*ಜಗವೆಲ್ಲ ಅದಂತಿರಲಿ*
*ಇನ್ನು ತನ್ನ ತಾನರಿದವಂಗೆ ತನುವೇ ಲಿಂಗ,*
*ಮನವೇ ಪುಷ್ಪ*
*ಈ ಅನುವನರಿದು, ಘನವ ನೆಮ್ಮಿದ ಶರಣರ*
*ಎನಗೊಮ್ಮೆ ತೋರಯ್ಯ*
*ನಿಮ್ಮ ಧರ್ಮ ನಿಮ್ಮ ಧರ್ಮ ಬಸವಪ್ರಿಯಕೂಡಲಚೆನ್ನಬಸವಣ್ಣ*

* * *

*ಲಿಂಗನಯನದಲ್ಲಿ ನೋಡುತ್ತ, ಲಿಂಗಜಿಹ್ವೆಯಲ್ಲಿ*
*ನುಡಿಯುತ್ತ*
*ಲಿಂಗಹಸ್ತದಲ್ಲಿ ಮುಟ್ಟುತ್ತ, ಲಿಂಗನಾಸಿಕದಲ್ಲಿ ವಾಸಿಸುತ್ತ,*
*ಲಿಂಗಸ್ತೋತ್ರವ ಕೇಳುತ್ತ,*
*ಲಿಂಗಪಾದದಲ್ಲಿ ನಡೆವುತ್ತ ಸರ್ವಾಂಗ ಲಿಂಗಮಯ*
*ವಾದ ಶರಣರ*
*ಸಂಗಸುಖದೊಳಗೆನ್ನನಿರಿಸಯ್ಯ, ಬಸವಪ್ರಿಯ*
*ಕೂಡಲ ಚೆನ್ನಬಸವಣ್ಣ !*

-ಹಡಪದ ಅಪ್ಪಣ್ಣ

## ಹಡಪದ ಅಪ್ಪಣ್ಣ

–ಎಸ್.ಎಸ್. ಭೂಸರೆಡ್ಡಿ *

ಕಲ್ಯಾಣದ ಅನುಭವ ಮಂಟಪದ ಪರಿಸರದಲ್ಲಿ ಬೆಳಗಿದ ಶ್ರೇಷ್ಠ ಶಿವಶರಣರ ಶ್ರೇಣಿಯಲ್ಲಿ ಹಡಪದ ಅಪ್ಪಣ್ಣನೂ ಒಬ್ಬನಾಗಿದ್ದಾನೆ. ಬಸವಣ್ಣನವರ ಆಪ್ತ ಕಾರ್ಯದರ್ಶಿಯಾಗಿ ನೆಲೆಯಾಗಿ ಮಹತ್ವದ ಪಾತ್ರ ವಹಿಸಿದ ಅಪ್ಪಣ್ಣ ಸುಮಾರು ೨೨೨ಕ್ಕೂ ಮಿಕ್ಕು ವಚನಗಳನ್ನು ಬರೆದಿರುವುದು ಗಮನಿಸ ಬೇಕಾದ ಅಂಶ. ವಚನಗಳನ್ನು ಕುರಿತಾಗಿಯಾಗಲಿ, ಜೀವನ ಚರಿತ್ರೆಯನ್ನಾಗಲಿ ಬರೆದಿರುವುದು ಬಹಳ ಕಡಿಮೆ. ಈ ಬಗೆಯ ಹೆಚ್ಚಿನ ಬೆಳಕು ಬೀರುವ ಕಾರ್ಯ ಇಂದು ನಡೆಯ ಬೇಕಾಗಿದೆ. ಇಷ್ಟೊಂದು ದೊಡ್ಡ ಸಂಖ್ಯೆಯಲ್ಲಿ ವಚನಗಳನ್ನು ಬರೆದಿರುವ ಹಡಪದ ಅಪ್ಪಣ್ಣ ಈಗಾಗಲೇ ಬೇಕಾದಷ್ಟು ಪ್ರಸಿದ್ಧಿ ಪಡೆಯಬೇಕಾಗಿತ್ತು. ನಮ್ಮವರ ಉದಾಸೀನತೆ ನಿರ್ಲ್ಯಕ್ಷತೆಯಿಂದಾಗಿ ಹೆಚ್ಚಿನ ಬೆಳಕಿಗೆ ಬಂದಿಲ್ಲ. ಏನೇ ಇರಲಿ ಇವನೊಬ್ಬ ಶ್ರೇಷ್ಠ ವಚನಕಾರನೆಂಬುದರಲ್ಲಿ ಎಳ್ಳಷ್ಟೂ ಸಂದೇಹವಿಲ್ಲ. ಈತನ ಅನೇಕ ವಚನಗಳು ಬೆಡಗಿನಿಂದ ಕೂಡಿವೆ. ಕೆಲವು ವಚನಗಳು ಸರಳತೆಯಿಂದ ವಿಜೃಂಭಿಸಿವೆ. ಈ ವಚನಗಳಲ್ಲಿ ಕಂಡುಬರುವ ತತ್ತ್ವನಿರೂಪಣೆ ಷಟ್ಸ್ಥಲದ ವಿವೇಚನೆಯಿಂದ ಶರಣ ಧರ್ಮದ ಯಥಾರ್ಥವಾದ ಜ್ಞಾನ ಪಡೆಯಲು ಸಾಧ್ಯವಾಗಬಹುದು. ಈತನ ವಚನಗಳ ಅಂಕಿತ 'ಬಸವಪ್ರಿಯ ಕೂಡಲಚನ್ನಬಸವಣ್ಣ'. ಚೆನ್ನಬಸವಣ್ಣ ನವರೇ ಈತನಿಗೆ ಲಿಂಗದೀಕ್ಷೆ ಮಾಡಿರಬಹುದು, ಅಲ್ಲದೇ ಈತನ ವಚನ ರಚನಾ ವಿಧಾನವನ್ನು ಗಮನಿಸಿದರೆ ಈ ಮಾತು ಇನ್ನಷ್ಟು ಸ್ಪಷ್ಟವಾಗುತ್ತದೆ. ಈತನು ಮಹಾಪಂಡಿತ ನಾಗಿದ್ದನೆಂಬುದಕ್ಕೆ ಈತನು ಬರೆದ ಸುದೀರ್ಘ ವಚನಗಳೇ ಸಾಕ್ಷಿಯೊದಗಿಸುತ್ತವೆ, ಕ್ರಿಯಾಜ್ಞಾನ ಸಾಮರಸ್ಯ ವನ್ನು ಕುರಿತಾಗಿ ಹೇಳಿದ ವಚನ ಇಂತಿದೆ.

*ಆಚಾರದ ಅರಿವು ಹೊರಗಾದ ಮೇಲೆ,*
*ಅಂಗದ ಮೇಲೆ ಲಿಂಗವಿದ್ದು ಫಲವೇನು ?*
*ಕುರುಡನ ಕಯ್ಯ ಕನ್ನಡಿ ಇದ್ದ ಹಾಗೆ.*
*ಬರಡಾವಿಗೆ ಶಿಶು ಹುಟ್ಟಿದ ಹಾಗೆ*
*ಕರಡಿಗೆ ಕಣ್ಣು ಬೇನೆ ಬಂದ ಹಾಗೆ*
*ಕುರುಡಿಗೆ ಮಕ್ಕಳಾದ ಹಾಗೆ,*
*ಇವರೇನ ಮಾಡಿದರೇನು ?*
*ತಮ್ಮ ಹಾನಿ ವೃದ್ಧಿಯನರಿಯದನ್ನಕ್ಕ*
*ಕಾಲ ಕಾಮಾದಿಗಳ ಬಾಯೊಳಗ ಸಿಕ್ಕಿ*
*ಅಗಿದಗಿದು ತಿನಿಸಿಕೊಳ್ಳುತ್ತಿಪ್ಪರಲ್ಲದೆ*
*ಎನ್ನದೇವ ಬಸವಪ್ರಿಯ ಕೂಡಲಚೆನ್ನಬಸವಣ್ಣ.*

ಮನಸ್ಸನ್ನು ಸ್ಥಿಮಿತದಲ್ಲಿಟ್ಟುಕೊಳ್ಳಬೇಕೆಂಬುದನ್ನು ಹೇಳುವ ಈ ವಚನ ನೀತಿಯನ್ನು ಬೋಧಿಸುತ್ತದೆ.

*ಕಟ್ಟಬೇಕು ಮನವ, ಮೆಟ್ಟಬೇಕು ಕರಣವ*
*ಸುಟ್ಟುರುಹಬೇಕು ಮದವ, ಸಪ್ತ ವ್ಯಸನಗಳ*
*ತೊಟ್ಟಿಲವ ಮುರಿದು ಕಣ್ಣಿಯ ಹರಿದು*
*ಆ ಬಟ್ಟ ಬಯಲಲ್ಲಿ ನಿಂದರೆ*
*ಬಸವಪ್ರಿಯ ಕೂಡಲಚನ್ನಬಸವಣ್ಣ.*

ಅಸತ್ಯವನ್ನು ಖಂಡಿಸುವ ದಿಟ್ಟತನ ಈತನ ವಚನಗಳಲ್ಲಿ ಕಂಡು ಬರುತ್ತದೆ. ಗುರುವಿನ ಮಹತ್ವವನ್ನು ಕುರಿತಾಗಿ ಹೇಳುವ ಈತನ ವಚನಗಳು ವೈಶಿಷ್ಟ್ಯಪೂರ್ಣವಾಗಿವೆ. ಉದಾಹರಣೆಗೆ–

*ಹಸನದೂಡಿ ಹರಗಿ ಹೊಲದಲ್ಲಿ ಕಸವ ಬಿತ್ತುವ*
*ಮರುಳರಂತೆ*
*ವಿಷಯ ಸುಖಂಗಳಿಗೆ ಹುಸಿಯನ್ನೇ ನುಡಿದು*
*ಗಸಣಿಗೊಳಗಾಗುವ*
*ಮನುಜರೆತ್ತಬಲ್ಲರೊ ಮಹಾಗುರುವಿನ ನೆಲೆಯ?*
*ಮರಣಬಾಧೆಗೊಳಗಾದವರು ನಿಮ್ಮನೆತ್ತಬಲ್ಲರೊ*
*ಬಸವಪ್ರಿಯ ಕೂಡಲ ಚನ್ನಬಸವಣ್ಣಾ ?*

ಹಡಪದ ಅಪ್ಪಣ್ಣ ಸಾಮಾನ್ಯರಲ್ಲಿ ಸಾಮಾನ್ಯ, ಅಸಾಮಾನ್ಯ ರಲ್ಲಿ ಅಸಾಮಾನ್ಯ ಶಿವಯೋಗದ ಮೇರು ಗಿರಿಯನ್ನೇರಿದ ಉದಾತ್ತಚೇತನ. ಬಸವಾದಿ ಪ್ರಮಥರ ಸಂಸರ್ಗದಲ್ಲಿ ಬೆಳೆದ ಅಪ್ಪಣ್ಣ ಅನುಪಮ ಅನುಭಾವಿಯೂ ಹೌದು. ಅಂತೆಯೇ ಆತನ ವಚನಗಳಲ್ಲಿ ಶಿವಯೋಗದ ತಂತ್ರಗಳನ್ನು ಒಂದೊಂದಾಗಿ ಬಿಡಿಸಿದ್ದಾನೆ. ಸಾಧಕರಿಗೆ ಮಾರ್ಗದರ್ಶನ ಮಾಡಿದ್ದಾನೆ. ಆದುದರಿಂದಲೇ ಅವನ ಹಸನಾದ ಹೃದಯ ದಿಂದ ಹೊರಹೊಮ್ಮಿದ ಮಾತುಗಳೆಲ್ಲವೂ ಮುತ್ತಾಗಿವೆ. ಆತನ ಧೈರ್ಯಸ್ಥೈರ್ಯಗಳು ಕೂಡ ಮೆಚ್ಚಬೇಕಾದವು.

*

* ನವಪ್ರಕಾಶನ, ಲಕ್ಷ್ಮೀನಗರ, ಧಾರವಾಡ– ೫೮೦ ೦೦೮





## ವಚನ ಪಿತಾಮಹ ಡಾ. ಫ.ಗು. ಹಳಕಟ್ಟಿ

–ಡಾ॥ ಬಿ.ಎಂ. ಪಾಟೀಲ *

"ನಮ್ಮ ದೇಶದ ಜನರಲ್ಲಿ ಕರ್ನಾಟಕತ್ವ ತೇಜಃಪುಂಜ ವಾದ ಭಾವನೆಯು ಇಲ್ಲದೆ ಇರುತ್ತದೆ. ಈ ಭಾವನೆಯು ಇಲ್ಲದಿರುವುದರಿಂದ ಸ್ವಜನ ಪ್ರೀತಿಯೂ ನಿಸ್ವಾರ್ಥ ಬುದ್ಧಿಯೂ ನಮ್ಮಲ್ಲಿ ಹೊರಟು ಹೋಗಿವೆ. ಈ ಸ್ಥಿತಿ ಯುಂಟಾದ್ದರಿಂದ ನಮ್ಮ ಜನರನ್ನು ಎಚ್ಚರಿಸಲು ನಾವು ಪ್ರಯತ್ನಿಸುವುದಿಲ್ಲ. ಇದರಿಂದ ಕರ್ನಾಟಕಸ್ಥರಿಂದ ಯಾವ ಮಹತ್ವದ ಕಾರ್ಯಗಳೂ ಆಗುವುದಿಲ್ಲ" ಎಂದು ಡಾ॥ ಫ.ಗು. ಹಳಕಟ್ಟಿಯವರು ೧೯೨೬ರಲ್ಲಿ ಬಳ್ಳಾರಿಯಲ್ಲಿ ಜರುಗಿದ ೧೨ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಸ್ಥಾನದಿಂದ ಹೇಳಿದ ಮಾತುಗಳಿವು. ಡಾ. ಫ.ಗು. ಹಳಕಟ್ಟಿ ಯವರು ತಮ್ಮ ಮಾತುಗಳಲ್ಲಿ ಕನ್ನಡಿಗರ ಅಭಿಮಾನ ಶೂನ್ಯತೆಯನ್ನು ಪ್ರಸ್ತಾಪಿಸಿ, ಕರ್ನಾಟಕವು ಹಿಂದುಳಿಯಲು ಕಾರಣಕೊಟ್ಟಿದ್ದಾರೆ. ಕನ್ನಡಿಗರಲ್ಲಿ ತಮ್ಮ ನೆಲ, ಜಲ, ಭಾಷೆ, ಸಾಹಿತ್ಯ, ಸಂಸ್ಕೃತಿ–ಇವುಗಳ ಬಗ್ಗೆ ಅಭಿಮಾನ ಮೂಡದ ಹೊರತು ಕರ್ನಾಟಕಸ್ಥರ ಪ್ರಗತಿ ಸಾಧ್ಯವಿಲ್ಲವೆಂದು ಎಪ್ಪತ್ತೈದು ವರ್ಷಗಳ ಹಿಂದೆಯೇ ಹೇಳಿದ್ದಾರೆ. ಇಂದಿಗೂ ನಿಷ್ಕ್ರಿಯ, ಜಡತ್ವ ಕರ್ನಾಟಕಸ್ಥರಲ್ಲಿ ಮನೋಭಾವನೆಗೆ ಹಳಕಟ್ಟಿಯವರ ಮಾತುಗಳು ಕನ್ನಡಿಯಂತಿವೆ. ಈ ದಿಸೆಯಲ್ಲಿ ನಮ್ಮ ಜನರನ್ನು ಎಚ್ಚರಿಸಿ ಸಿದ್ಧಗೊಳಿಸುವುದು ತುಂಬ ಅಗತ್ಯವಿದೆ.

**ಬಾಲ್ಯ ಶಿಕ್ಷಣ :** ಫ.ಗು. ಹಳಕಟ್ಟಿಯವರ ಪೂರ್ವಜರು ಸವದತ್ತಿ ತಾಲ್ಲೂಕಿನ ಹಳಕಟ್ಟಿ ಗ್ರಾಮದವರೆಂದು ತಿಳಿಯುತ್ತದೆ. ಇವರ ಮುತ್ತಜ್ಜರು ಧಾರವಾಡಕ್ಕೆ ಬಂದು ನೆಲೆಸಿರಬಹುದಾಗಿದೆ. ಫಕೀರಪ್ಪನವರು ಗುರುಬಸಪ್ಪ ಮತ್ತು ದಾನಮ್ಮರ ಪುತ್ರರಾಗಿ ದಿನಾಂಕ ೦೨-೦೭-೧೮೮೦ರಂದು ಧಾರವಾಡದಲ್ಲಿ ಜನಿಸಿದರು. ಫಕೀರಪ್ಪ ಫ.ಗು. ಹಳಕಟ್ಟಿ ಯವರ ಅಜ್ಜನ ಸ್ಮರಣೆಗಾಗಿ ಇಟ್ಟ ಹೆಸರು. ಫಕೀರಪ್ಪ ಮೂರು ವರ್ಷದ ಬಾಲಕನಿರುವಾಗಲೆ ತಾಯಿ ದಾನಮ್ಮ ನನ್ನು ಕಳೆದುಕೊಂಡ. ಅಜ್ಜಿ ಬಸಮ್ಮಳ ಪ್ರೀತಿ ವಾತ್ಸಲ್ಯದಲ್ಲಿ ಬೆಳೆದು ದೊಡ್ಡವನಾದ. ತಂದೆ ಗುರುಬಸಪ್ಪ ಸುಸಂಸ್ಕೃತ, ವಿದ್ಯಾವಂತ. ಪ್ರಾಥಮಿಕ ಶಾಲಾ ಶಿಕ್ಷಕರಾಗಿದ್ದು ಬಾಲಕ ಫಕೀರಪ್ಪ ಸಂಪೂರ್ಣ ವ್ಯಕ್ತಿಯಾಗಿ ಬೆಳೆಯಬೇಕೆಂಬ ಹಂಬಲ ಹೊಂದಿದ್ದರು. ಹೀಗಾಗಿ ಫಕೀರಪ್ಪನ ವಿದ್ಯಾಭ್ಯಾಸ ದಲ್ಲಿ ಹೆಚ್ಚಿನ ಕಾಳಜಿ ವಹಿಸಿದರು. ಧಾರವಾಡದಲ್ಲಿ ಪ್ರಾಥಮಿಕ ಹೈಸ್ಕೂಲ್ ಶಿಕ್ಷಣವನ್ನು ಮುಗಿಸಿಕೊಂಡರು. ಉಚ್ಚ ಶಿಕ್ಷಣ ಕ್ಕಾಗಿ ಮುಂಬಯಿ ಸೇಂಟ್ ಝೇವಿಯರ್ ಕಾಲೇಜು ಸೇರಿ ೧೯೦೨ರಲ್ಲಿ ಬಿ.ಎ. ೧೯೦೪ರಲ್ಲಿ ಎಲ್.ಎಲ್.ಬಿ. ಪದವಿ ಪಡೆದುಕೊಂಡರು. ಇಲ್ಲಿ ಆಲೂರ ವೆಂಕಟರಾಯ ರಂಥ ಪ್ರತಿಭಾನ್ವಿತರು ಹಳಕಟ್ಟಿಯವರ ಸಹಪಾಠಿಗಳಾಗಿ ದೊರೆತದ್ದು ವಿಶೇಷ. ಒಟ್ಟಿನಲ್ಲಿ ಮುಂಬಯಿ ಕಾಲೇಜು ವಿದ್ಯಾರ್ಥಿ ಜೀವನ ಮಹತ್ವಾಕಾಂಕ್ಷೆಯುಳ್ಳ ಫ.ಗು. ಹಳಕಟ್ಟಿ ಯವರ ವ್ಯಕ್ತಿತ್ವ ವಿಕಾಸದಲ್ಲಿ ಹೊಸ ಆಯಾಮ ಒದಗಿಸಿತು.

**ವಕೀಲಿ ವೃತ್ತಿ :** ಫ.ಗು. ಹಳಕಟ್ಟಿಯವರು ಕಾಯಿದೆ ಪದವಿ ಪಡೆದುಕೊಂಡು ತಮ್ಮ ವಕೀಲಿ ವೃತ್ತಿಯನ್ನು ಮೊದಲು ಧಾರವಾಡದಲ್ಲಿ ಪ್ರಾರಂಭಿಸಿದರು. ನಂತರ ಬೆಳಗಾವಿಯಲ್ಲಿ ಕೆಲವರ್ಷ ನಡೆಸಿದರು. ಮಾವ ಚಿಕ್ಕೋಡಿ ತಮ್ಮಣ್ಣಪ್ಪನವರ ಸಲಹೆ ಮೇರೆಗೆ ವಿಜಾಪುರಕ್ಕೆ ಬಂದು ವಕೀಲಿವೃತ್ತಿ ಪ್ರಾರಂಭಿಸಿದರು. ಅಂದಿನ ಬ್ರಿಟಿಷ್ ಸರಕಾರ ಹಳಕಟ್ಟಿ ಯವರ ನ್ಯಾಯ, ನೀತಿ, ಶಿಸ್ತು, ಪ್ರಮಾಣಿಕತೆಯನ್ನು ಮೆಚ್ಚಿ ಕೊಂಡು ೧೯೨೬ರಲ್ಲಿ ಅವರನ್ನು ಪ್ರಾಸಿಕ್ಯೂಟರ್ ಮತ್ತು ಗವರ್ನ್‌ಮೆಂಟ್ ಪ್ಲೀಡರ್ ಎಂದು ನೇಮಿಸಿತು.

ಫ.ಗು. ಹಳಕಟ್ಟಿಯವರು ವಕೀಲಿವೃತ್ತಿಯಲ್ಲಿ ಮುಂದು ವರಿದಿದ್ದರೆ ಜನಪ್ರಿಯ ವಕೀಲರಾಗಿ, ಹಣ ಗಳಿಸಿ ಶ್ರೀಮಂತಿಕೆಯಿಂದ ಜೀವನ ಕಳೆಯಬಹುದಾಗಿತ್ತು. ಆದರೆ ಹಾಗಾಗಲಿಲ್ಲ. ಅವರಾಗಲೇ ಶಿವಶರಣರ ಬದುಕು, ವಚನ ಸಾಹಿತ್ಯ ಅವರ ಮನಸ್ಸನ್ನು ಆಕರ್ಷಿಸಿತ್ತು. ಹೀಗಾಗಿ ಧರ್ಮ, ಸಾಹಿತ್ಯ, ಸಂಸ್ಕೃತಿ, ಸಮಾಜ ಸೇವಾ ಕಾರ್ಯಗಳಿಗಾಗಿ ವಕೀಲಿವೃತ್ತಿಯಲ್ಲಿ ತೊಡಗಬಾರದೆಂದು ೧೯೨೯ರಲ್ಲಿ ಸ್ವಯಂ ನಿವೃತ್ತಿ ಪಡೆದರು. ಇಡೀ ತಮ್ಮ ಬದುಕನ್ನು ಜನಪರ ಸೇವಾಕಾರ್ಯಗಳಿಗೆ ಮೀಸಲಾಗಿಟ್ಟು ಜೀವನ ಪರ್ಯಂತ ದುಡಿದರು.

**ಪತ್ರಿಕೋದ್ಯಮ :** ಫ.ಗು. ಹಳಕಟ್ಟಿಯವರು ಪತ್ರಿಕೋದ್ಯಮಿ ಆದದ್ದು ಇತರರಂತೆ ಹೊಟ್ಟೆಪಾಡಿಗೆ ಅಲ್ಲ. ಅದು ಅವರಿಗೆ ವ್ರತ; ಒಂದು ಕರ್ತವ್ಯ; ಸಮಾಜ ಸೇವೆಯ ಒಂದು

* ಮಹಾಲಿಂಗಪುರ.

ದಾರಿ. ಜನರಲ್ಲಿ ಉಚ್ಚ ಧಾರ್ಮಿಕ–ಸಾಂಸ್ಕೃತಿಕ ಮನೋಭಾವನೆ ಬೆಳೆಸಿ ಅವರ ನೈತಿಕ–ಬೌದ್ಧಿಕ ಮಟ್ಟವನ್ನು ಎತ್ತರಿಸುವ ಧ್ಯೇಯೋದ್ದೇಶವನ್ನಿಟ್ಟು ೧೯೨೬ರಲ್ಲಿ 'ಶಿವಾನುಭವ' ಎಂಬ ಮಾಸ ಪತ್ರಿಕೆ ಪ್ರಾರಂಭಿಸಿದರು. ಅದನ್ನು ಅವರು ೧೯೬೧ರವರೆಗೆ ಅಂದರೆ ೩೫ ವರ್ಷಗಳವರೆಗೆ ನಡೆಸಿಕೊಂಡು ಬಂದರು. ಜನರಿಗೆ ಕೇವಲ ಧರ್ಮ–ಸಂಸ್ಕೃತಿ ಜ್ಞಾನ ವಿದ್ದರೆ ಸಾಲದು. ಅವರಿಗೆ ಸಮಾಜ, ರಾಷ್ಟ್ರ, ಅಂತರಾಷ್ಟ್ರೀಯ ವಿವಿಧ ಸುದ್ದಿಗಳು, ಸಮಸ್ಯೆಗಳು ತಿಳಿಯಬೇಕೆಂಬ ಉದ್ದೇಶವನ್ನು ಹೊಂದಿ ೧೯೨೭ರಲ್ಲಿ 'ನವಕರ್ನಾಟಕ' ಎಂಬ ವಾರಪತ್ರಿಕೆಯನ್ನು ಪ್ರಾರಂಭಿಸಿದರು.

ಒಬ್ಬನೇ ವ್ಯಕ್ತಿಯ ಸಂಪಾದಕತ್ವದಲ್ಲಿ ಇಷ್ಟೊಂದು ದೀರ್ಘವಾಗಿ ಅಂದು ನಡೆಸಿಕೊಂಡು ಬಂದ ಪತ್ರಿಕೆಗಳಿಲ್ಲ. ಶಿವಾನುಭವ ಮತ್ತು ನವಕರ್ನಾಟಕ ಎರಡೂ ಪತ್ರಿಕೆಗಳು ಫ.ಗು. ಹಳಕಟ್ಟಿಯವರ ಜೀವನದ ಮೈಲುಗಲ್ಲುಗಳಾಗಿವೆ. ಈ ಪತ್ರಿಕೆಗಳನ್ನು ಓದುವಾಗ ಪುಟ ಪುಟಗಳಲ್ಲಿ ಹಳಕಟ್ಟಿಯವರ ಜನಪರವಾದ ಕಾಳಜಿ ಎದ್ದು ತೋರುತ್ತದೆ.

**ಸಾಹಿತ್ಯ ಸೇವೆ :** ಫ.ಗು. ಹಳಕಟ್ಟಿಯವರು ವಚನ ಸಾಹಿತ್ಯಕ್ಕೆ ಮಾಡಿದ ಸೇವೆ ವಿಶ್ವಮಾನ್ಯವಾದದ್ದು. ಕಾಲಗರ್ಭದಲ್ಲಿ ನಾಶವಾದ, ಹುಳು ಹುಪ್ಪಡಿಗಳಿಗೆ ಆಹಾರವಾಗಿ ಅಳಿದುಳಿದ ವಚನ ಸಾಹಿತ್ಯವನ್ನು ರಕ್ಷಿಸಲು ಹಳಕಟ್ಟಿಯವರ ಜೀವನದ ಪ್ರಯತ್ನ ಅಷ್ಟಿಷ್ಟಲ್ಲ. ಹಸ್ತಪ್ರತಿಗಳ ಸಂಗ್ರಹ, ಸಂಶೋಧನೆ, ಪರಿಷ್ಕರಣೆ, ಸಂಪಾದನೆ, ಪ್ರಕಟಣೆ ಈ ಎಲ್ಲ ಕಾರ್ಯಗಳನ್ನು ಅತ್ಯಂತ ನಿಷ್ಠೆ, ಭಕ್ತಿ–ಭಾವದಿಂದ ಪೂಜ್ಯತೆಯಿಂದ ನೆರವೇರಿಸಿದ್ದಾರೆ.

೧೯೨೩ರಿಂದ ೧೯೫೩ರ ಅವಧಿಯಲ್ಲಿ ಹಳಕಟ್ಟಿಯವರು ಸಂಪಾದಿಸಿ ಪ್ರಕಟಿಸಿದ ವಚನಶಾಸ್ತ್ರಸಾರ ೩ ಸಂಪುಟಗಳು ಶಿವಶರಣರ ನುಡಿಮುತ್ತುಗಳ ಅಪೂರ್ವ ಸಂಗ್ರಹ. ೧೮೦೦ ಪುಟಗಳುಳ್ಳ ಇಂಥ ಬೃಹತ್ ಸಂಪುಟಗಳನ್ನು ಸಂಪಾದಿಸಿ ಪ್ರಕಟಿಸುವುದು ಅಂದಿನ ದಿನಗಳಲ್ಲಿ ತುಂಬಾ ಸಾಹಸದ ಕೆಲಸ. ಹಳಕಟ್ಟಿಯವರ ದಿವ್ಯಪ್ರತಿಭೆ, ಪಾಂಡಿತ್ಯ, ಅಪಾರ ಅನುಭವ, ವ್ಯಾಪಕವಾದ ವ್ಯಾಸಂಗ, ವಿನೂತನ ದೃಷ್ಟಿ–ಧೋರಣೆಗಳ ಪ್ರತೀಕವಾದ ವಚನಶಾಸ್ತ್ರ ಸಾರ ಸಂಪುಟಗಳು ಅವರಿಗೆ ಹಿಮಾಲಯ ಸದೃಶ್ಯಕೀರ್ತಿಯನ್ನು ತಂದುಕೊಟ್ಟಿವೆ.

ವಚನ ಸಾಹಿತ್ಯದಷ್ಟೇ ಮುಖ್ಯವಾದ ಇತಿಹಾಸ, ಶಾಸನ, ಕಾವ್ಯ, ಗದ್ಯ, ಸಂಸ್ಕೃತಿ ಕುರಿತು ಮಹತ್ವದ ಬರವಣಿಗೆಯನ್ನು ಹಳಕಟ್ಟಿಯವರಲ್ಲಿ ಕಾಣುತ್ತೇವೆ. ಅವರು ಶಿವಶರಣರ ರಾಜರಾಣಿಯರ, ಸತ್ಪುರುಷರ ಚರಿತ್ರೆಗಳನ್ನು ಸಂಶೋಧಿಸಿ ಪ್ರಕಟಿಸುವ ಮೂಲಕ ಇತಿಹಾಸ–ಸಂಸ್ಕೃತಿಯ ಮೇಲೆ ಹೊಸ ಬೆಳಕು ಬೀರಿದ್ದಾರೆ. ನವಕರ್ನಾಟಕ ನಿರ್ಮಾಣ ವಿಷಯಗಳನ್ನೊಳಗೊಂಡ ಅವರ ಲೇಖನ ಸಾಹಿತ್ಯ ವಂತೂ ಬಹು ಮಹತ್ವದ್ದಾಗಿದೆ. ಅದು ಬೆಳಕಿಗೆ ಬಂದದ್ದು ತೀರ ಕಡಿಮೆ. ಫ.ಗು. ಹಳಕಟ್ಟಿಯವರ ಒಟ್ಟು ಸಾಹಿತ್ಯವನ್ನು ಲೆಕ್ಕ ಮಾಡಿ ಹೇಳುವುದು ತುಂಬ ಕಷ್ಟ, ಎಷ್ಟೇ ಪ್ರಯತ್ನಿಸಿದರೂ ಕೊರತೆ ಉಳಿದುಕೊಳ್ಳುತ್ತದೆ. ಅವರ ಒಟ್ಟು ಸಾಹಿತ್ಯವನ್ನು ವರ್ಗೀಕರಿಸಿ ಹೀಗೆ ಹೇಳಬಹುದಾಗಿದೆ.

| | | |
|---|---|---|
| ೧. ಸ್ವತಂತ್ರ ಗ್ರಂಥಗಳು | – | ೧೨ |
| ೨. ಸಂಪಾದನೆ ಗ್ರಂಥಗಳು | – | ೨೨ |
| ೩. ಅಪ್ರಕಟಿತ ಗ್ರಂಥಗಳು | – | ೫೧ |
| ೪. ಶಾಸನ ಸಂಪಾದನೆ | – | ೦೭ |
| ೫. ಬಿಡಿ ಲೇಖನಗಳು | – | ೧೩೦ |

೬ ಇತರ : ಭಾಷೆಗಳು, ಮುನ್ನುಡಿಗಳು, ವಿಮರ್ಶೆಗಳು, ಪತ್ರಗಳು, ದಿನಚರಿ, ಬಸವೇಶ್ವರ ವಚನಗಳ ಅನುವಾದ.

೧೯೧೪ ರಿಂದ ೧೯೬೧ರವರೆಗೆ ಫ.ಗು. ಹಳಕಟ್ಟಿಯವರು ನಿರಂತರವಾಗಿ ಫ.ಗು. ಹಳಕಟ್ಟಿಯವರು ನಿರಂತರವಾಗಿ ಸಾಹಿತ್ಯ ಸೇವೆಯಲ್ಲಿ ತೊಡಗಿಸಿ ಕೊಂಡಿದ್ದರು. ಫಗು. ಹಳಕಟ್ಟಿ ಅವರ ಸಾಹಿತ್ಯ ಕೃಷಿ ನಿರಾತಂಕವಾಗಿರಲಿಲ್ಲ. ಆರ್ಥಿಕ ಮುಗ್ಗಟ್ಟು, ಓದುಗರ ಅನಾಸಕ್ತಿ, ಕೌಟುಂಬಿಕ ಆಘಾತಗಳು, ನಿರಂತರ ಅನಾರೋಗ್ಯ– ಇದೇ ಮೊದಲಾದ ಹತ್ತಾರು ಅಡ್ಡಿ ಆತಂಕಗಳ ಮಧ್ಯದಲ್ಲಿ ಇಷ್ಟೊಂದು ಸಾಹಿತ್ಯ ಕೃಷಿ ಮಾಡಿದ್ದು ಪವಾಡಸದೃಶವೆನಿಸುತ್ತದೆ. ಅನೇಕ ಮಠಗಳು, ವಿಶ್ವವಿದ್ಯಾಲಯಗಳು, ಸಂಘ–ಸಂಸ್ಥೆಗಳು ಮಾಡಬಹು ದಾದ ಸಾಹಿತ್ಯ ಸೇವೆಯನ್ನು ಫ.ಗು. ಹಳಕಟ್ಟಿಯವರು ಮಾಡಿ ಮುಗಿಸಿದ್ದು ಹೆಮ್ಮೆಪಡುವಂತಿದೆ.

**ಶಿಕ್ಷಣ ಸಂಸ್ಥೆಗಳ ಸ್ಥಾಪನೆ :** ಶಿಕ್ಷಣ ಕ್ಷೇತ್ರಕ್ಕೆ ಫ.ಗು. ಹಳಕಟ್ಟಿಯವರು ಮಾಡಿದ ಸೇವೆ ಅನುಪಮವಾದದ್ದು. ಶಿಕ್ಷಣ ಸಂಸ್ಥೆಗಳನ್ನು ಹೇಗೆ ಕಟ್ಟಿ ಬೆಳೆಸಬೇಕೆಂಬುದಕ್ಕೆ ಹಳಕಟ್ಟಿಯವರ ವಿಚಾರಗಳು ಉತ್ತಮ ಮಾರ್ಗದರ್ಶನ ನೀಡುತ್ತವೆ. ಶಿಕ್ಷಕ, ವಿದ್ಯಾರ್ಥಿ, ಪಠ್ಯವಿಷಯ, ಪಾಠಸಲಕರಣೆಗಳು, ಬೋಧನಾವಿಧಾನ, ವಸತಿಗೃಹ, ಸ್ತ್ರೀ ಶಿಕ್ಷಣ ಮೊದಲಾದವುಗಳ ಬಗ್ಗೆ ಸೂಕ್ತ ವಿಚಾರ ಮಂಡಿಸಿದ್ದಾರೆ.

ಪ್ರಾಥಮಿಕ ಶಿಕ್ಷಣ, ಪ್ರೌಢಶಿಕ್ಷಣ, ಉನ್ನತ ಶಿಕ್ಷಣಗಳು ಯಾವ ಉದ್ದೇಶ ಹೊಂದಿರಬೇಕು. ವಿದ್ಯಾರ್ಥಿಗಳನ್ನು ಹೇಗೆ ಸಿದ್ಧಗೊಳಿಸಬೇಕೆಂದು ದೀರ್ಘವಾಗಿ ಸಮಾಲೋಚಿಸಿದ್ದಾರೆ. ಪ್ರಾಥಮಿಕ ಶಿಕ್ಷಣದಿಂದಲೇ ನಮ್ಮ ರಾಷ್ಟ್ರೀಯ ಕಾರ್ಯಗಳನ್ನು ಆರಂಭಿಸಬೇಕೆಂದು ಹೇಳುವ ಹಳಕಟ್ಟಿಯವರ ವಿಚಾರಗಳು ಗಮನಾರ್ಹವಾಗಿದೆ. ಹಳಕಟ್ಟಿಯವರು ಶಿಕ್ಷಣ ತಜ್ಞರಾಗಿದ್ದಂತೆ ಶಿಕ್ಷಣ ಸಂಸ್ಥೆಗಳ ಸಂಸ್ಥೆಗಳ ಸಂಸ್ಥಾಪಕರೂ ಆಗಿದ್ದಾರೆ. ೧೯೧೦ರಲ್ಲಿ ಬಿ.ಎಲ್.ಡಿ.ಎ. ಸಂಸ್ಥೆ, ೧೯೧೭ರಲಿ ಶ್ರೀ ಸಿದ್ಧೇಶ್ವರ ಪ್ರೌಢಶಾಲೆ ಪ್ರಾರಂಭಿಸಿದರು. ೧೯೩೩ರಲ್ಲಿ ಆರಂಭವಾದ ಬೆಳಗಾವಿಯ ಲಿಂಗರಾಜ ಕಾಲೇಜು, ೧೯೪೪ರಲ್ಲಿ ಪ್ರಾರಂಭವಾದ ಬಾಗಲಕೋಟೆಯ ಬಸವೇಶ್ವರ ವಿದ್ಯಾಸಂಸ್ಥೆ–ಇವುಗಳ ಯಶಸ್ಸಿನ ಹಿಂದೆ ಹಳಕಟ್ಟಿಯವರ ಪಾತ್ರ ಮುಖ್ಯವಾಗಿದೆ.

ಈ ಶಿಕ್ಷಣ ಸಂಸ್ಥೆಗಳ ಆಡಳಿತ ಮಂಡಳಿಗಳ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ. ಜನತಾ ಶಿಕ್ಷಣ ಸಂಸ್ಥೆ, ಬನಹಟ್ಟಿ ಇದರ ಅಧ್ಯಕ್ಷರಾಗಿಯೂ ಇವರು ದುಡಿದಿದ್ದಾರೆ. ಹರ್ಡೇಕರ ಮಂಜಪ್ಪನವರ ಆಲಮಟ್ಟಿ ವಿಶ್ವವಿದ್ಯಾಲಯ ವ್ಹಾಯಿಸ್ ಪ್ರೆಸಿಡೆಂಟ್ ಎಂದು ಕಾರ್ಯ ನಿರ್ವಹಿಸಿದ್ದಾರೆ. ಇಂದು ವಿಜಾಪುರ ಜಿಲ್ಲೆ ವಿದ್ಯಾಕೇಂದ್ರವಾಗಿ ಹತ್ತಾರು ಮುಖಗಳಿಂದ ಬೆಳೆಯುತ್ತಿರುವುದಕ್ಕೆ ಹಳಕಟ್ಟಿಯವರ ಅಂದಿನ ಶೈಕ್ಷಣಿಕ ಮುಂದಾಲೋಚನೆ, ಶ್ರಮ ಮುಖ್ಯ ಕಾರಣವಾಗಿದೆ.

**ಸಹಕಾರಿ ಸಂಸ್ಥೆಗಳ ಸ್ಥಾಪನೆ :** ಆರ್ಥಿಕ ಕ್ಷೇತ್ರಕ್ಕೂ ಫ.ಗು. ಹಳಕಟ್ಟಿಯವರು ವಿಶೇಷವಾಗಿ ದುಡಿದಿದ್ದಾರೆ. ದಿ. ವಿಜಾಪುರ ಶ್ರೀ ಸಿದ್ಧೇಶ್ವರ ಸಹಕಾರಿ ಬ್ಯಾಂಕ್, ದಿ ವಿಲ್ಸನ್ ಎಂಡಿಫ್ಯಾಮಿನ್ ಇನ್‌ಸ್ಟಿಟ್ಯೂಟ್, ಒಕ್ಕಲಿಗರ ಸಹಕಾರಿ ಸಂಘ, ಭೂತನಾಳ ಕೆರೆಯ ನಿರ್ಮಾಣ ಯೋಜನೆ–ಇವೆಲ್ಲವುಗಳ ಮೂಲಕ ವಿಜಾಪುರ ಜನತೆಗೆ ಆರ್ಥಿಕ ಭದ್ರತೆ ಒದಗಿಸಿದ್ದಾರೆ. ಇಂದು ಶ್ರೀ ಸಿದ್ಧೇಶ್ವರ ಬ್ಯಾಂಕು ರಾಜ್ಯದಲ್ಲಿಯೇ ಪ್ರತಿಷ್ಠಿತ ಸಹಕಾರಿ ಬ್ಯಾಂಕೆಂದು ಹೆಸರು ಗಳಿಸಿದೆ.

**ಧರ್ಮದೃಷ್ಟಾರ :** ಉಚ್ಚ ಧಾರ್ಮಿಕ ಜ್ಞಾನ ಪ್ರಸಾರದಿಂದ ಮನುಷ್ಯನಲ್ಲಿ ಉದಾತ್ತ ವಿಚಾರಗಳು ಉಂಟಾಗುತ್ತವೆ. ಕಳಪೆ ಧಾರ್ಮಿಕ ತತ್ತ್ವಗಳು ಸಮಾಜ ವಿಘಟಿಸಿದಂತೆ, ಉಚ್ಚ ಧಾರ್ಮಿಕ ತತ್ತ್ವಗಳ ಪ್ರಸಾರ ಸಮಾಜ ಸಂಘಟನೆಗೆ ಕಾರಣವೆಂಬುದನ್ನು ಹಳಕಟ್ಟಿಯವರು ಅರಿತುಕೊಂಡಿದ್ದರು. ಅಂತೆಯೇ ಅವರು ಧಾರ್ಮಿಕ ನೆಲೆಗಟ್ಟಿನ ಮೇಲೆ ವ್ಯಕ್ತಿ, ಸಮಾಜ, ರಾಷ್ಟ್ರದ ಐಕ್ಯತೆಯನ್ನು ಸಾಧಿಸಲು ಇಚ್ಛಿಸಿದರು. ಅವರಿಗೆ ವೀರಶೈವ ಧರ್ಮದ ತತ್ತ್ವಗಳಲ್ಲಿ ಅಪಾರವಾದ ನಂಬಿಕೆ, ವೀರಶೈವ, ಕರ್ನಾಟಕ ಧರ್ಮವೆಂದು ಅವರು ಪ್ರತಿಪಾದಿಸಿದ್ದಾರೆ. ವೀರಶೈವ ಧರ್ಮದ ತತ್ತ್ವಗಳ ಬಗ್ಗೆ, ಅವರ ಗ್ರಂಥಗಳ ಬಗ್ಗೆ, ಮಹಾಪುರುಷರ ಬಗ್ಗೆ ಬಹುಜನರಿಗೆ ಗೊತ್ತಿರದ ಅಂದಿನ ಸಂದರ್ಭದಲ್ಲಿ ಫ.ಗು. ಹಳಕಟ್ಟಿಯವರು ಧರ್ಮನಿಷ್ಠುರರಾಗಿ ಕಾರ್ಯನಿರ್ವಹಿಸಿದ್ದುಂಟು. ಅವರ ಪ್ರಯತ್ನದ ಫಲವಾಗಿ ವೀರಶೈವ ಧರ್ಮಕ್ಕೆ ನ್ಯಾಯವಾಗಿ ದೊರೆಯಬೇಕಾಗಿದ್ದ ಸ್ಥಾನ ಲಭಿಸಿದೆ.

ವೀರಶೈವ ಧರ್ಮದ ಅನುಷ್ಠಾನದಿಂದ ಕರ್ನಾಟಕದಲ್ಲಿ ಧರ್ಮ ಸಮನ್ವಯ ಸಾಧಿಸಲು ಸಾಧ್ಯವೆಂದು ಹಳಕಟ್ಟಿಯವರು ಘೋಷಿಸಿದರು. ವೀರಶೈವ ಶಬ್ದ ಜಾತಿವಾಚಕವಲ್ಲ; ಅದರಲ್ಲಿ ಎಲ್ಲ ಧರ್ಮಗಳ ಉತ್ಕೃಷ್ಟ ತತ್ತ್ವಗಳಿವೆ. ಅಲ್ಲಿ ಎಲ್ಲರಿಗೂ ಸರಿಸಮಾನ ಅವಕಾಶವಿದೆ. ಈ ವಿಶಾಲತ್ವವನ್ನು ವೀರಶೈವ ಧರ್ಮ ಹೊಂದಿದ್ದನ್ನು ತಿಳಿಸಿಕೊಡಲು ಫ.ಗು. ಹಳಕಟ್ಟಿಯವರು ಬಹುವಾಗಿ ಶ್ರಮಿಸಿದರು. ವೀರಶೈವ ಧರ್ಮದ ಬಗ್ಗೆ ಉತ್ಕಟ ಅಭಿಮಾನ ಹೊಂದಿದ ಅವರು ಪರಧರ್ಮವನ್ನು ಯಾವ ಸಂದರ್ಭದಲ್ಲಿಯೂ ಎತ್ತಿ ಅವಹೇಳನ ಮಾಡಿಲ್ಲ. ಅಂದರೆ ಅವರು ಸ್ವಧರ್ಮಾಭಿಮಾನಿಯಾಗಿದ್ದಂತೆ ಪರಧರ್ಮಪ್ರೇಮಿಯೂ ಆಗಿದ್ದರು. ಇದೇ ಹಳಕಟ್ಟಿಯವರ ಧರ್ಮಶ್ರದ್ಧೆಯ ಗುಟ್ಟು, ಧರ್ಮದ ಬಗ್ಗೆ ಗೊಂದಲ ಎಬ್ಬಿಸಿ ಜನತೆಯ ನೆಮ್ಮದಿ ಕದಡುವ ಇಂದಿನ ಸಮಾಜ ಮುಖಂಡರು ಹಳಕಟ್ಟಿಯವರಿಂದ ಪಾಠ ಕಲಿಯಲು ಸಾಕಷ್ಟು ವಿಷಯಗಳಿವೆ.

**ಆದರ್ಶ ಜೀವನ :** ಫ.ಗು. ಹಳಕಟ್ಟಿಯವರಿಗೆ ಸ್ವಂತ ಮನೆ ಇರಲಿಲ್ಲ. ಇದ್ದ ಮನೆಯಲ್ಲಿ 'ಹಿತಚಿಂತಕ' ಮುದ್ರಣಾಲಯ ಸ್ಥಾಪಿಸಿದರು. ಅವರು ಜೀವನ ಪರ್ಯಂತ ಬಾಡಿಗೆ ಮನೆಯಲ್ಲಿ ವಾಸಿಸಿದರು. ಫಕೀರಪ್ಪ ಎಂಬ ತಮ್ಮ ಹೆಸರನ್ನು ಅನ್ವರ್ಥಕವಾಗಿಸಿಕೊಂಡು ಬದುಕಿದ ಶರಣರವರು. ಬನಹಟ್ಟಿಯ ಚಿಕ್ಕೋಡಿ ತಮ್ಮಣ್ಣಪ್ಪನವರ ಮಗಳು ಭಾಗೀರಥಿದೇವಿ ಹಳಕಟ್ಟಿಯವರಿಗೆ ತಕ್ಕ ಹೆಂಡತಿ. ಇವರಿಗೆ

ಏಳು ಜನ ಮಕ್ಕಳು. ಈ ಏಳು ಜನ ಮಕ್ಕಳಲ್ಲಿ ಚಂದ್ರಶೇಖರ, ಗುರುಪುತ್ರಪ್ಪ, ಪಾರ್ವತಿ ಮಾತ್ರ ಸಂಸಾರಸ್ಥ ರಾಗಿರುತ್ತಾರೆ. ಉಳಿದವರು ಮದುವೆ ವಯಸ್ಸಿಗೆ ಬರುವ ಪೂರ್ವದಲ್ಲಿಯೇ ತೀರಿಕೊಂಡಿದ್ದಾರೆ. ಹಳಕಟ್ಟಿಯವರು ಮಕ್ಕಳಿಗೆ ಉತ್ತಮ ಶಿಕ್ಷಣ ಕೊಟ್ಟರು. ಹಿರಿಯ ಮಗ ಚಂದ್ರಶೇಖರ ತಾಂತ್ರಿಕ ಶಿಕ್ಷಣ ಪಡೆದು ಉನ್ನತ ಹುದ್ದೆಯಲ್ಲಿದ್ದ. ಆಕಸ್ಮಿಕ ವಿಮಾನ ಅಪಘಾತದಲ್ಲಿ ಮರಣ ಹೊಂದಿದ. ಹೀಗೆ ಅನೇಕ ಕೌಟುಂಬಿಕ ತಾಪತ್ರಯಗಳ ಮಧ್ಯೆ ಸ್ಥಿತಪ್ರಜ್ಞರಾಗಿ ಹಳಕಟ್ಟಿಯವರು ಬದುಕಿದ್ದರೆಂಬುದು ಬಹು ಮುಖ್ಯವಾದದ್ದು.

**ವ್ಯಕ್ತಿತ್ವ ಮಹಿಮೆ :** ಫ.ಗು. ಹಳಕಟ್ಟಿಯವರು ಸರಳ ಸಜ್ಜನಿಕೆಯ ಶೀಲಸಂಪನ್ನರಾಗಿ ಬದುಕಿದ್ದರು. ಸುಸಂಸ್ಕೃತ ಪರಿಸರ, ತಂದೆ ಗುರುಬಸಪ್ಪನವರ ಆದರ್ಶ ಶಿಕ್ಷಕ ವೃತ್ತಿ, ಸಾಹಿತ್ಯಿಕ ಮನಸ್ಸು, ಮಾವ ಚಿಕ್ಕೋಡಿ ತಮ್ಮಣ್ಣನವರ ಸಾರ್ವಜನಿಕ ಸೇವಾ ಮನೋಧರ್ಮ, ಸ್ವಂತ ಅಧ್ಯಯನ- ಇವೆಲ್ಲವುಗಳ ಗಾಢ ಪ್ರಭಾವದಿಂದ ಫ.ಗು. ಹಳಕಟ್ಟಿಯವರಲ್ಲಿ ಜೀವನ ನಿಷ್ಠೆ, ನಿರಾಡಂಬರ, ಸೌಜನ್ಯ, ಪ್ರಾಮಾಣಿಕತೆ, ಸ್ವಾವಲಂಬನೆ, ಸ್ಥಿತಪ್ರಜ್ಞೆ, ಔದಾರ್ಯ, ಅಂತಃಕರುಣೆ ಚೈತನ್ಯಶೀಲತೆ ಮೊದಲಾದ ಸದ್ಗುಣಗಳು ಬೆಳೆದು ಬಂದಿದ್ದವು. ಹಳಕಟ್ಟಿಯವರು ಶೈಕ್ಷಣಿಕ, ಸಾಹಿತ್ಯ, ಧಾರ್ಮಿಕ, ಔದ್ಯೋಗಿಕ, ರಾಜಕೀಯ, ಆರ್ಥಿಕ- ಹೀಗೆ ಹತ್ತು ಹಲವು ಕ್ಷೇತ್ರಗಳಲ್ಲಿ ಅವಿಸ್ಮರಣೀಯ ಸೇವಾಕಾರ್ಯಗಳನ್ನು ಮಾಡಿದ್ದಾರೆ. ಅವರ ಬಹುಮುಖ ವ್ಯಕ್ತಿತ್ವವನ್ನು ಸರಕಾರ, ಸಮಾಜ, ಜನತೆ ಮೆಚ್ಚಿ ಅಭಿಮಾನಪರವಾಗಿ ಗೌರವ, ಪ್ರಶಸ್ತಿ, ಸ್ಥಾನಮಾನ ನೀಡಿ ಕೃತಜ್ಞತೆ ವ್ಯಕ್ತಪಡಿಸುದ್ದುಂಟು. **ವಚನಪಿತಾಮಹ, ರಾವಸಾಹೇಬ, ರಾವಬಹದ್ದೂರ, ಡಾಕ್ಟರ್ ಆಫ್ ಲಿಟ್ರೇಚರ್, ಕರ್ನಾಟಕದ ಮ್ಯಾಕ್ಸ್ ಮುಲ್ಲರ್, ವಚನಗುಮ್ಮಟ, ಸಚೇತನ ವಿಶ್ವವಿದ್ಯಾಲಯ, ಸತ್ಯಶರಣ, ಅಭಿನವ ಬಸವಣ್ಣ, ನವಕರ್ನಾಟಕ ಶಿಲ್ಪಿ, ಯುಗಪುರುಷ** -ಎಂದೆಲ್ಲ ಕರೆದಿದ್ದಾರೆ. ಈ ಎಲ್ಲ ವಿಶೇಷಣಗಳು ಬರೀ ಹೋಲಿಕೆಗಳೆಂದು ತೋರುವುದಿಲ್ಲ. ಇವುಗಳಲ್ಲಿ ಹಳಕಟ್ಟಿಯವರ ವ್ಯಕ್ತಿತ್ವದ ಹೂರಣವಿದೆ.

೧೯೨೧ರಲ್ಲಿ ಹುಬ್ಬಳ್ಳಿಯಲ್ಲಿ ನಾಲ್ಕನೆಯ ವೀರಶೈವ ತರುಣ ಸಮ್ಮೇಳನದ ಅಧ್ಯಕ್ಷ, ೧೯೨೬ ಬಳ್ಳಾರಿಯಲ್ಲಿ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ, ೧೯೨೮ ಧಾರವಾಡದಲ್ಲಿ ಕರ್ನಾಟಕ ಏಕೀಕರಣ ಪರಿಷತ್ತಿನ ಅಧ್ಯಕ್ಷ, ೧೯೩೩ರಲ್ಲಿ ಧಾರವಾಡದಲ್ಲಿ ಅಖಿಲಭಾರತ ವೀರಶೈವ ಮಹಾಸಭೆಯ ಅಧ್ಯಕ್ಷ, ೧೯೫೭ ಹಂಸಭಾವಿ ಅಖಿಲಭಾರತ ಶಿವಾನುಭವ ಸಂಸ್ಥೆಯ ಅಧ್ಯಕ್ಷ- ಈ ಗೌರವ ಸ್ಥಾನಗಳಲ್ಲದೆ ೧೯೧೨ ಸಿದ್ಧೇಶ್ವರ ಸಹಕಾರಿ ಬ್ಯಾಂಕಿನ ಅಧ್ಯಕ್ಷ, ೧೯೧೭ ವಿಜಾಪುರ ಜಿಲ್ಲಾ ಕಾಂಗ್ರೆಸ್ ಕಮಿಟಿ ಕಾರ್ಯದರ್ಶಿ, ೧೯೧೯ ವಿಜಾಪುರ ಪುರಸಭೆ ಅಧ್ಯಕ್ಷ ೧೯೨೦ ಮುಂಬಯಿ ವಿಧಾನ ಪರಿಷತ್ ಸದಸ್ಯ, ೧೯೨೭ ಒಕ್ಕಲುತನ ಸುಧಾರಣಾ ಸಮಿತಿ ಅಧ್ಯಕ್ಷ, ೧೯೨೦ ಮುಂಬಯಿ ವಿಶ್ವವಿದ್ಯಾನಿಲಯದ ಸೆನೇಟ್ ಸದಸ್ಯ- ಹೀಗೆ ವಿವಿಧ ಸಂಘ ಸಂಸ್ಥೆಗಳ ಕಾರ್ಯದರ್ಶಿಗಳಾಗಿ, ಅಧ್ಯಕ್ಷರಾಗಿ ಸಂಘಟಕರಾಗಿ ಜನಪರ ಕಾರ್ಯಗಳನ್ನು ಮಾಡಿದ್ದಾರೆ. ಫ.ಗು. ಹಳಕಟ್ಟಿಯವರು ವಿವಿಧ ಕ್ಷೇತ್ರಗಳಲ್ಲಿ ಮಾಡಿದ ಸಾಧನೆಗಳನ್ನು ಸ್ಮರಿಸಿ, ಶ್ಲಾಘಿಸಿ ಅನೇಕ ಸಂಘ ಸಂಸ್ಥೆಗಳು ಅವರನ್ನು ಸನ್ಮಾನಿಸಿ ಗೌರವಿಸಿ ಅವರ ವರ್ಧಂತ್ಯುತ್ಸವ, ಶತಮಾನೋತ್ಸವಗಳನ್ನು ಇಡೀ ನಾಡಿನಾದ್ಯಂತ ಆಚರಿಸಿದ್ದುಂಟು.

**ಸ್ಮಾರಕ ಭವನ :**ಫ.ಗು. ಹಳಕಟ್ಟಿಯವರು ೮೫ ವರ್ಷ ತುಂಬು ಜೀವನ ಬಾಳಿ ೧೯೬೪ರಲ್ಲಿ ಲಿಂಗೈಕ್ಯರಾದರು. ಅವರ ಸಮಾಧಿಯನ್ನು ಬಿ.ಎಲ್.ಡಿ. ಶಿಕ್ಷಣ ಸಂಸ್ಥೆಯ ಆವರಣದಲ್ಲಿ ನಿರ್ಮಿಸಲಾಗಿದೆ. ಫ.ಗು. ಹಳಕಟ್ಟಿಯವರ ಮರಣೋತ್ತರ ಹಲವಾರು ವಿಧಾಯಕ ಕಾರ್ಯಕ್ರಮಗಳು ನಡೆಯುತ್ತಿವೆ. ವಿಜಾಪುರದ ಬಿ.ಎಲ್.ಡಿ. ಶಿಕ್ಷಣ ಸಂಸ್ಥೆಯ ಆವರಣದಲ್ಲಿ ಲಕ್ಷಾಂತರ ರೂಪಾಯಿ ವೆಚ್ಚದಲ್ಲಿ ನಿರ್ಮಿಸಲಾಗಿದ್ದ ಡಾ. ಫ.ಗು. ಹಳಕಟ್ಟಿ ಸ್ಮಾರಕ ಭವನ ಒಂದು ಶ್ಲಾಘನೀಯ ಕಾರ್ಯವಾಗಿದೆ. ಡಾ. ಫ.ಗು. ಹಳಕಟ್ಟಿಯವರ ನೆನಪನ್ನು ಚಿರಂತನಗೊಳಿಸುವ ಈ ಸ್ಮಾರಕ ಭವನ ಅರ್ಥಪೂರ್ಣವಾಗಿ ಕಾರ್ಯಯೋಜನೆಗಳನ್ನು ಹಮ್ಮಿಕೊಂಡು ರೂಪುಗೊಳ್ಳಬೇಕೆಂಬುದು ಅನೇಕರ ಆಶಯವಾಗಿದೆ. ಫ.ಗು. ಹಳಕಟ್ಟಿಯವರ ಆದರ್ಶ ಜೀವನವನ್ನು, ಸಾಹಿತ್ಯ-ಸಾಮಾಜಿಕ ಸೇವೆಗಳನ್ನು ಸ್ಮರಿಸಿಕೊಳ್ಳುವುದರಲ್ಲಿ ನಾಡಿನ ಪ್ರಗತಿಯಿದೆ.

ದಿನಾಂಕ : ೩೦-೦೧-೨೦೦೮ರಂದು ಬಿಜಾಪುರದ ಬಿ.ಎಲ್.ಡಿ. ಶಿಕ್ಷಣ ಸಂಸ್ಥೆಯ ಆವರಣದಲ್ಲಿಯೇ 'ಫ.ಗು. ಹಳಕಟ್ಟಿ ಸಮಗ್ರ ಸಾಹಿತ್ಯ ೧೫ ಸಂಪುಟಗಳು' ಬಿಡುಗಡೆಗೊಂಡವು. ಈ ಮಹತ್ಕಾರ್ಯದಿಂದಾಗಿ ಫ.ಗು. ಹಳಕಟ್ಟಿಯವರು ಪುನರ್‌ಜನ್ಮ ಪಡೆದಂತಾಗಿದೆ.

*







# ವಚನಗಳಲ್ಲಿ ಇಷ್ಟಲಿಂಗಪೂಜಾ ವಿಧಾನ

-ರುದ್ರಮೂರ್ತಿ ಎಲೆರಾಂಪುರ *

*ಇಷ್ಟಲಿಂಗವೆಂದರೆ ಏನು?*

*ಜಗದಗಲ ಮುಗಿಲಗಲ ಮಿಗೆಯಗಲ ನಿಮ್ಮಗಲ*
*ಪಾತಾಳದಿಂದತ್ತತ್ತ ನಿಮ್ಮ ಶ್ರೀಚರಣ*
*ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀಮುಕುಟ*
*ಅಗಮ್ಯ ಅಗೋಚರ ಅಪ್ರತಿಮ ಲಿಂಗವೆ*
*ಕೂಡಲಸಂಗಮದೇವಯ್ಯ*
*ಎನ್ನ ಕರಸ್ಥಲಕ್ಕೆ ಬಂದು ಚುಳುಕಾದಿರಯ್ಯ*

-ಬಸವಣ್ಣನವರು

ಆಕಾಶ ಭೂಮಿಗಳನ್ನೊಳಗೊಂಡಂತೆ ಇಡೀ ವಿಶ್ವದ ಆಚೆ ಈಚೆಗೂ ವ್ಯಾಪಿಸಿರುವ ಭಗವಂತನನ್ನು ನೋಡುವುದಕ್ಕೂ ಸನಿಹ ಹೋಗುವುದಕ್ಕೂ ಸಾಧ್ಯವಾಗದಿದ್ದರೂ ಆತನು ಭಕ್ತರ ಅಂಗೈಯಲ್ಲಿನ ಬೊಗಸೆಯಲ್ಲಿ ಅಡಗಿ ನಿಜದ ನೆಲೆಯಾಗಿ ಅರಿವಿನ ಆಗರವಾಗಿ ಕುಳಿತಿರುವ ಆ ಪರಾತ್ಪರ ವಸ್ತುವೇ ಇಷ್ಟ 'ಲಿಂಗ' ಎಂದು ಜಗಜ್ಯೋತಿ ಬಸವಣ್ಣನವರು ತಮ್ಮ ವಚನದಲ್ಲಿ ಹೇಳಿದ್ದಾರೆ.

ಇಷ್ಟಲಿಂಗವಿಲ್ಲದವರ ಜೀವನ ಹೇಗಿರುತ್ತದೆ?

*ಆಕಾಶದಲ್ಲಾಡುವ ಪಟಕ್ಕಾದರೂ ಮೂಲಸೂತ್ರವಿರಬೇಕು*
*ಕಲಿಯಾದಡೆಯೂ ಕಜ್ಜವಿಲ್ಲದೆ ಆಗೌ*
*ಭೂಮಿ ಇಲ್ಲದೆ ಬಂಡಿ ನಡೆವುದೆ?*
*ಅಂಗಕ್ಕೆ ಲಿಂಗವಿಲ್ಲದೆ ನಿಸ್ಸಂಗವಾಗಬಾರದು*
*ನಮ್ಮ ಕೂಡಲಚೆನ್ನಸಂಗಮದೇವರಲ್ಲಿ*
*ಸಂಗವಿಲ್ಲದೆ ನಿಸ್ಸಂಗಿಯೆಂದು ನುಡಿಯಬಹುದೆ ಪ್ರಭುವೆ?*

ಇದೇ ಪ್ರಶ್ನೆಯನ್ನು ಸಿದ್ಧರಾಮೇಶ್ವರರು ಅಲ್ಲಮಪ್ರಭುವಿಗೆ ಕೇಳಿರುತ್ತಾರೆ. ಅದಕ್ಕೆ ಅಲ್ಲಮಪ್ರಭುಗಳು ಚನ್ನಬಸವಣ್ಣನವರ ಮೂಲಕ ಈ ವಚನದೊಂದಿಗೆ ಇಷ್ಟಲಿಂಗ ಧರಿಸುವುದರ ಬಗ್ಗೆ ಮನವರಿಕೆ ಮಾಡಿಸಿ ಇಷ್ಟಲಿಂಗಧಾರಿಯಾಗುವಂತೆ ಮಾಡುತ್ತಾರೆ.

ಆಕಾಶದಲ್ಲಿ ಸ್ವಚ್ಛಂದವಾಗಿ ಗಾಳಿಪಟ ಹಾರಾಡ ಬೇಕಾದರೆ ಅದಕ್ಕೆ ಮೂಲಸೂತ್ರವಿರಬೇಕು. ಸೂತ್ರವಿಲ್ಲದ ಗಾಳಿಪಟದ ಗತಿ ಏನಾಗಬಹುದು? ಪಟಕ್ಕೆ ಸೂತ್ರವಿದ್ದಂತೆ ದೇಹದ ಮೇಲೆ ಇಷ್ಟಲಿಂಗವಿರಲೇಬೇಕು. ಎಂತಹ ವೀರನಾದರೂ ಕೈಯಲ್ಲಿ ಒಂದು ಆಯುಧವಿಲ್ಲದಿದ್ದರೆ ಯುದ್ಧದಲ್ಲಿ ಜಯ ಅಸಾಧ್ಯವಾದುದು. ವೀರನಿಗೆ ಆಯುಧವಿದ್ದಂತೆ ದೇಹದ ಮೇಲೆ ಇಷ್ಟಲಿಂಗವಿರಲೇಬೇಕು. ಭೂಮಿಯಿಲ್ಲದೆ ಬಂಡಿ ನಡೆಯಲು ಸಾಧ್ಯವಿಲ್ಲ. ಬಂಡಿ ಸಾಗಬೇಕಾದರೆ ಭೂಮಿಯಿರಲೇಬೇಕು. ಅಂತೆಯೇ ದೇಹವೆಂಬ ಬಂಡಿಯು ಸಾರ್ಥಕತೆಯ ಹಾದಿಯಲ್ಲಿ ಸಾಗಿ, ಉತ್ತಮ ಗುರಿ ಮುಟ್ಟಬೇಕಾದರೆ ಇಷ್ಟಲಿಂಗ ಬೇಕೇ ಬೇಕು ಎನ್ನುತ್ತಾರೆ. ಎಲ್ಲರ ಆತ್ಮದಲ್ಲಿ ಪರಮಾತ್ಮ ನಿರುವಾಗ ಆತನ ಸಂಗವಿಲ್ಲ, ಸಂಗಬೇಡ ಎಂದು ನುಡಿಯ ಬಹುದೇ? ಎಂದು ಕೇಳುವ ಮೂಲಕ ಇಷ್ಟಲಿಂಗದ ಅವಶ್ಯಕತೆಯನ್ನು ತಿಳಿಸುತ್ತಾರೆ.

ಇಷ್ಟಲಿಂಗವನ್ನು ಹೇಗೆ ಧರಿಸಬೇಕು ?

*ಒಮ್ಮೆ ನೆಲದಲ್ಲಿ ಬಿತ್ತಿದಾ ಬಿತ್ತುವಾ ಕಿತ್ತು ಕಿತ್ತು ಮತ್ತೆ ಬಿತ್ತುತ್ತಾ ಹೋದಡೆ*
*ಆ ಬಿತ್ತು ಮೊಳೆತು ಕಳೆದೋರಿ ಬೆಳೆದು*
*ಬೆಳೆಸನೀವ ಪರಿಯಿನ್ನೆಂತೊ, ಮರುಳು ಮಾನವ ?*
*ಗುರುಕೊಟ್ಟ ಲಿಂಗವ ತೊರೆ ತೊರೆದು*
*ಮರಳಿ ಮರಳಿ ಧರಿಸಿದಡೆ*
*ಆ ಇಷ್ಟಲಿಂಗವು ಅನಿಷ್ಟಗಳ ಕಳೆದು*
*ಇಷ್ಟಾರ್ಥವ ನೀವ ಪರಿ ಇನ್ನೆಂತೊ?*
*ಇದು ಕಾರಣ-ಕೂಡಲಚೆನ್ನಸಂಗಯ್ಯನಲ್ಲಿ*
*ಮುಕ್ತಿಯನರಸುವಡೆ*
*ಅಂಗದಲ್ಲಿ ಹೆರೆಹಿಂಗದೆ ಲಿಂಗವ ಧರಿಸಿರಬೇಕು.*

-ಚೆನ್ನಬಸವಣ್ಣನವರು.

ಒಮ್ಮೆ ಭೂಮಿಯಲ್ಲಿ ಬಿತ್ತಿದ ಬೀಜವನ್ನು ಪದೇ ಪದೇ ಕಿತ್ತು ಮತ್ತೆಮತ್ತೆ ಭೂಮಿಯಲ್ಲಿ ಬಿತ್ತುತ್ತಿದ್ದರೆ ಆ ಬೀಜಕ್ಕೆ ಮೊಳಕೆ ಬರುವುದಿಲ್ಲ. ಹಾಗೆಯೇ ಶ್ರೀಗುರು ಕೊಟ್ಟ ಇಷ್ಟಲಿಂಗವನ್ನು ಧರಿಸುವುದು, ಪದೇ ಪದೇ ಶರೀರದಿಂದ ತೆಗೆದಿಡುವುದು ಹೀಗೆ ಮಾಡಿದರೆ ಆ ಇಷ್ಟಲಿಂಗವು ನಮ್ಮ ಎಲ್ಲಾ ಅನಿಷ್ಟಗಳನ್ನು ಕಳೆದು ಇಷ್ಟಾರ್ಥಗಳನ್ನು ನೆರವೇರಿಸಲು ಸಾಧ್ಯವೇ? ಆದಕಾರಣ ನಮ್ಮ ಇಷ್ಟಾರ್ಥಗಳು ನೆರವೇರಿ ನಮಗೆ ಬದುಕಿನಲ್ಲಿ ಶಾಂತಿ ನೆಮ್ಮದಿ ತೃಪ್ತಿ ಮುಕ್ತಿಯನ್ನು ಕಾಣಬೇಕಾದರೆ ಎಂದೆಂದಿಗೂ ಶರೀರದಿಂದ ಇಷ್ಟಲಿಂಗವನ್ನು ಅಗಲಿಸದೆ ಧರಿಸಬೇಕೆನ್ನುತ್ತಾರೆ ನ್ನಬಸವಣ್ಣನವರು.

*

## ಸರ್ವಜ್ಞನ ವಚನಗಳು

*"ಜ್ಞಾನಿಗೆ ಗುಣಲೇಸು । ಮಾನಿನಿಗೆ ಪತಿ ಲೇಸು ।*
*ಸ್ವಾನುಭವಿಗಳ ನುಡಿಲೇಸು, ಎಲ್ಲಕು ನಿ ।*
*ಧಾನಿಯೇ ಲೇಸು ಸರ್ವಜ್ಞ"*

ಜ್ಞಾನಿಯಾದವನಿಗೆ, ತಿಳುವಳಿಕೆಯುಳ್ಳವನಿಗೆ ಗುಣವೂ, ಹೆಂಗಸರಿಗೆ ಪತಿಯೂ ಹಾಗೂ ಸ್ವಾನುಭವಿಗಳ ನುಡಿಯು ಒಳ್ಳೆಯದಾಗಿರುವಂತೆ ಪ್ರತಿಯೊಂದು ಕಾರ್ಯದಲ್ಲೂ, ಘಟನೆಯಲ್ಲೂ, ಕ್ಷಣದಲ್ಲೂ ಅವಸರ-ಅವಸರವಾಗಿ ಮಾತನಾಡಿ ಅನರ್ಥಕ್ಕೆ ಕಾರಣವಾಗುವ ಬದಲು, ನಿಧಾನವಾಗಿ ಯೋಚಿಸಿ ಮಾತನಾಡುವುದನ್ನು ಕಲಿಯಬೇಕು. 'ನುಡಿದರೆ ಲಿಂಗಮೆಚ್ಚಿ ಅಹುದು ಅಹುದೆನಬೇಕು' ಎಂಬ ಶರಣರ ವಚನವನ್ನು ಸ್ಮರಣೆಯಲ್ಲಿ ಇಟ್ಟುಕೊಂಡು ಮಾತನಾಡಿದರೆ ಉತ್ತಮ.

* * *

*"ಸತ್ಯವೆಂಬುದು ತಾನು । ನಿತ್ಯದಲಿ ಮೆರೆದಿಹುದು ।*
*ಮಿಥ್ಯ ಸತ್ಯವನು ಬೆರೆದರೂ, ಇಹಪರದಿ ।*
*ಸತ್ಯಕ್ಕೆ ಜಯವು ಸರ್ವಜ್ಞ"*

ಈ ಮೇಲಿನ ತ್ರಿಪದಿಯು 'ಸತ್ಯಮೇವ ಜಯತೇ' ಎಂಬ ತತ್ವ ಸಿದ್ಧಾಂತವನ್ನು ಸಾರಿ ಹೇಳುತ್ತದೆ. ಯಾಕೆಂದರೆ ಸತ್ಯವೆಂಬುದು ಯಾವಾಗಲೂ ಶ್ರೇಷ್ಠವಾದುದು. ಅದು ಮೆರೆಯುತ್ತದೆ ಕೂಡಾ. ಕೆಲವು ಸಂದರ್ಭಗಳಲ್ಲಿ ಸತ್ಯದಲ್ಲಿ ಮಿಥ್ಯ(ಸುಳ್ಳು) ಬೆರೆತರೂ, ಮುಂದೆ ಇಹ-ಪರಗಳಲ್ಲಿ ಸತ್ಯಕ್ಕೆ ಗೆಲುವು, ಜಯ ಖಚಿತ. ಇದು ಕಟ್ಟಿಟ್ಟದ್ದು ಎಂಬುದನ್ನು ಯಾರೂ ಮರೆಯಬಾರದು. ಅಂತೆಯೇ ಹಿರಿಯ ಅನುಭವಿಗಳು 'ಸತ್ಯಕ್ಕೆ ಸಾವಿಲ್ಲ' ಎಂದಿದ್ದಾರೆ.

-ರಮೇಶಬಾಬು ಯಾಳಗಿ,
ಸುರಪುರ, ಗುಲಬರ್ಗಾ ಜಿಲ್ಲೆ.

## ತಿರುಕ್ಕುರುಳ್

ಕನ್ನಡ ಅನುವಾದ : ನ. ಮುನಿಸ್ವಾಮಿ
ಅಧ್ಯಾಯ -೨೧
ಗೃಹಧರ್ಮ

### ಸಮಾಜಕ್ಕೆ ಉಪಕರಿಸುವ ಕರ್ತವ್ಯಪ್ರಜ್ಞೆ

ಪ್ರತ್ಯುಪಕಾರ ಬೇಕಿಲ್ಲ ಕರ್ತವ್ಯಕ್ಕೆ; ಮಳೆಗರೆವ ಮೋಡಕೆ
ಯಾವ ಪ್ರತಿಫಲವನೀವುದೀ ಜಗವು ?

ಶ್ರಮಿಸಿ ತರುವ ಸಿರಿಯನೆಲ್ಲವ ಯೋಗ್ಯರಿಗೆ ಕೊಟ್ಟು
ಉಪಕರಿಪ ಉದ್ದೇಶಕೆಂದು ತಿಳಿವುದು.

ದೇವಲೋಕದೊಳು ಭೂಲೋಕದೊಳೂ ಕಾಣಲರಿದು,
ಉಪಕಾರದಂಥ ಉನ್ನತ ಕಾರ್ಯವನು.

ಉಪಕರಿಪ ಪ್ರಜ್ಞೆಯುಳ್ಳವನೇ ಜೀವದಿಂದಿರುವವನು;
ಉಳಿದವರೆಲ್ಲಾ ಸತ್ತವರೆಂದು ಎಣಿಸಲ್ಪಡುವರು.

ಊರ ಕೆರೆಯೊಳು ನೀರು ನೆರೆದಂತೆ, ಲೋಕಕೀವ
ಮಹಾಪ್ರಾಜ್ಞನ ಐಸಿರಿಯು.

ಊರ ನಡುವಿನ ಮರವು ಫಲಬಿಟ್ಟಂತೆ,
ಉದಾರಿಯೊಳು ಸಿರಿಯು ಸೇರಿರಲು.

ರೋಗವನು ನಿವಾರಿಸುವ ಔಷಧಿಯ ಮರದಂತೆ,
ಸಹೃದಯನಲಿ ಸಿರಿಯು ಸೇರಿರಲು.

ಸಿರಿಯಿರದ ಕಾಲದೊಳು ಉಪಕರಿಸಲಂಜರು,
ಕರ್ತವ್ಯ ಪ್ರಜ್ಞೆಯುಳ್ಳ ಕರುಣಾಳುಗಳು.

ಕೊಡುಗೈಯವನು ಬಡವನಾದರೆ ತಾ ಮಾಡುವ
ಉಪಕಾರವ ಮಾಡಲಾಗದುದಕೆ ಮರುಗುವನು.

ಉಪಕಾರದಿಂದ ಕೇಡುಂಟೆಂದರೂ, ತನ್ನನ್ನೇ ಮಾರಿ
ಅದನು ಕೊಳುವುದು ತಕ್ಕುದೆನಿಸುವುದು.





## ಬೌದ್ಧಧರ್ಮ ಹಾಗೂ ಮಹಿಳಾ ವಿಮೋಚನೆ

- ಡಾ॥ ಕೆ.ಎಸ್. ರತ್ನಮ್ಮ *

ಧರ್ಮಪ್ರವರ್ತಕರು, ಚಾರಿತ್ರಿಕ ವ್ಯಕ್ತಿಗಳು ವಿಶ್ವದಲ್ಲಿ ಉದಿಸುತ್ತಲೇ ಇರುತ್ತಾರೆ. ಜನರ ಮೌಢ್ಯಗಳನ್ನು ಅಳಿಸಿ ಕ್ರಾಂತಿಕಾರಕ ಪರಿವರ್ತನೆಗೆ ಕಾರಣವಾಗುತ್ತಲೇ ಇದ್ದಾರೆ. ಇತಿಹಾಸದಲ್ಲಿ ಬೌದ್ಧ, ಶೈವ ಪಂಥಗಳನ್ನು ರೂಪಿಸಿದ ಬುದ್ಧ, ಬಸವೇಶ್ವರ ಮುಂತಾದವರು ಅಂಥ ಪ್ರಮುಖರು. ಅವರು ಸಾಮಾಜಿಕ ಸಾಂಸ್ಕೃತಿಕ ಕ್ರಾಂತಿಕಾರರಾಗಿ ಬಂದ ಪರಿಣಾಮ, ಸ್ವಾತಂತ್ರ್ಯ ಸಮಾನತೆ ಯಂತಹ ಪ್ರಜಾಪ್ರಭುತ್ವವಾದೀ ನಿಲುವು ಗಳು ಹೆಚ್ಚು ಮಹತ್ವ ಪಡೆದವು. ಕ್ರಿ.ಪೂ. ೫೬೨-೪೮೭ರ ಅವಧಿಯಲ್ಲಿ ಗೌತಮ ಬುದ್ಧನಿಂದ ಬೌದ್ಧ ಧರ್ಮದ ಸಿದ್ಧಾಂತಗಳು ಪ್ರತಿಪಾದಿತವಾದದ್ದು ವಿದ್ವಾಂಸರಲ್ಲಿ ಸರ್ವಸಮ್ಮತವಾದ ವಿಚಾರ.

ಬುದ್ಧನ ಕಾಲಕ್ಕಾಗಲೇ ವೈದಿಕ ಪುರೋಹಿತಶಾಹಿಯಿಂದಾಗಿ ಆಚಾರ ವಿಚಾರಗಳಲ್ಲಿ ಗೊಂದಲದ ಸ್ಥಿತಿ ಏರ್ಪಟ್ಟಿತ್ತು. ವೇದಮಂತ್ರಗಳು ಯಾಂತ್ರೀಕೃತವಾಗಿದ್ದವು. ಅಮೂಲ್ಯ ವಿಚಾರಾಂಶಗಳು ಹಿಂದೆ ಸರಿದು ಮತೀಯತೆ ಪ್ರಾಮುಖ್ಯತೆ ಪಡೆದಿತ್ತು. ಅಂತಹ ಸಂದರ್ಭದಲ್ಲಿ ಬೌದ್ಧ ಧರ್ಮವು ಮಾನವ ಬದುಕಿನ ಅನ್ವೇಷಣೆ, ಆಚರಣೆಗಳಿಗೆ ಮನ್ನತೆ ನೀಡಿ, ಯಾವುದೇ 'ದೈವ'ವನ್ನು ಎತ್ತಿ ಹಿಡಿಯದೆ ಜೀವನದ ಪಾವಿತ್ರ್ಯತೆ, ನೈತಿಕತೆ, ಆಚರಣೆಗಳಿಗೆ ಮೌಲಿಕತೆ ನೀಡಿತು. ದೇವರು ಎಂಬ ಅತೀಂದ್ರಿಯ, ಅಮೂರ್ತತೆಗೆ ಮಣಿಯುವ ರೀತಿಯನ್ನು ತ್ಯಜಿಸಿ, ನೈತಿಕ ಜೀವನದ ಅತ್ಯುನ್ನತ ಮಟ್ಟವನ್ನು ಆಚರಣೆಗೆ ಅಳವಡಿಸಿ ಅದನ್ನು ಮೋಕ್ಷ ಸಂಪಾದನೆಯ ಸಾಧನವೆಂದು ಹೇಳಿದ್ದು ಮಹತ್ವದ ಅಂಶ. ಹೀಗೆ ಸಾಮಾಜಿಕ, ಜಾತಿಪದ್ಧತಿ, ದೈವ ಪ್ರಾಧಾನ್ಯತೆಗಳನ್ನು ನಿರಾಕರಿಸಿದ ಬೌದ್ಧಧರ್ಮದಲ್ಲಿ 'ಅಷ್ಟಾಂಗಮಾರ್ಗ'ದ ಸರಳ ಸೂತ್ರ ಪಾಲನೆಗೆ ಆದ್ಯತೆ ನೀಡಿತು. ಮಾನವ ಬದುಕನ್ನು ವಿಶ್ಲೇಷಿಸಿದಾಗ ಶಾರೀರಿಕ, ಮಾನಸಿಕ ನೋವು, ಈ ದುಃಖಕ್ಕೆ ಕಾರಣವಾಗುವ ಜೀವಿಯ ಆಸೆ, ಇದರ ನಿವಾರಣೆಯಿಂದ ನಿರಂತರ ದುಃಖದ ನಿವಾರಣೆಗೆ ಮಾರ್ಗ ದೊರೆಯುತ್ತದೆ ಎಂದು ಬೋಧಿಸಿದ್ದು ವಿಶಿಷ್ಟವೂ ವಿಚಾರಪೂರ್ಣವೂ ಆಗಿತ್ತು. ಸಂಸಾರದಿಂದ ಮುಕ್ತಿ ಪಡೆದು ಹುಟ್ಟು ಸಾವು ಇಲ್ಲದ 'ನಿರ್ವಾಣ' ಎಂಬ ಸದ್ಗತಿಯನ್ನು ಪಡೆವ ಮಾರ್ಗ, ಜೊತೆಗೆ 'ಕರುಣೆ' ಪ್ರಧಾನ ಲಕ್ಷಣವಾಗಿ ಎಲ್ಲ ವರ್ಗದ ಜನರನ್ನು ಸೆಳೆದದ್ದು ವಿಶೇಷ ಸಂಗತಿ.

ಬೌದ್ಧಧರ್ಮವು ಕ್ರಿ.ಪೂ. ನೂರರವರೆಗೂ ಭಾರತದ ವಿವಿಧೆಡೆಗಳಲ್ಲಿ ಹರಡಿತ್ತು. ಪ್ರಾರಂಭದ ವೇಳೆ ಕ್ರಿ.ಪೂ. ೫೦೦-೩೫೦ರ ಪೂರ್ವದ ಚಂಪಾದಿಂದ ಪಶ್ಚಿಮದ ಸಾವತ್ಥಿ (ಶ್ರಾವಸ್ತಿ)ಯವರೆಗೆ, ಉತ್ತರದ ಕುರುಪಾಂಚಾಲಗಳಿಂದ ದಕ್ಷಿಣದವರೆಗೂ ವ್ಯಾಪಿಸಿತ್ತು, ಭಾರತದಲ್ಲಿ ಹುಟ್ಟಿದ ಬೌದ್ಧ ಧರ್ಮ ಹೊರದೇಶಗಳಿಗೂ ಹರಡಿದ್ದು ಮಹತ್ವದ ಸಂಗತಿ. ಟಿಬೇಟ್, ಸಿಲೋನ್, ಬರ್ಮಾ, ಪಶ್ಚಿಮ, ಮಧ್ಯ ಹಾಗೂ ಆಗ್ನೇಯ ಏಷ್ಯಾದಲ್ಲಿ. ಚೀನಾ, ಕೊರಿಯಾ, ಜಪಾನ್‌ಗಳಲ್ಲಿ ಕ್ರಮೇಣ ಹರಡಿ ಹೆಚ್ಚು ಕಾಲ ಪ್ರಭಾವ ಬೀರಿದ್ದು. ಇಂದಿಗೂ ಪ್ರಚಲಿತವಿರುವುದು ಗಮನಾರ್ಹ ಅಂಶ.

**ಬೌದ್ಧ ಸಾಹಿತ್ಯ:** ಬುದ್ಧನ ವಚನಗಳು, ಧರ್ಮದ ನಿಯಮಗಳು ಪಾಲಿ ಭಾಷೆಯಲ್ಲಿವೆ. ಇವುಗಳನ್ನು ಗಳನ್ನು

* ೨೦೦೬, ಕೋರ್ಟ್ ಹಿಂಭಾಗ, ಸರಸ್ವತಿಪುರಂ, ಮೈಸೂರು-೫೭೦ ೦೦೯.

ಸಂಗ್ರಹಿಸುವ ಕೆಲಸ ಕಾಲಕಾಲಕ್ಕೆ ನಡೆದು ಬಂದಿದೆ. ಬೌದ್ಧ ಧರ್ಮದ ಸಾಂಘಿಕತೆಯನ್ನು ಬಲಪಡಿಸುವ ಉದ್ದೇಶಕ್ಕಾಗಿ ಪಾಲಿ, **ತಿಪಿಟಕ** ಸಂಕಲನಗಳ ಕಾರ್ಯವನ್ನು ಆಯ್ದ ಸಾವಿರ ಭಿಕ್ಷುಗಳಿಗೆ ವಹಿಸಿ ಬರಹರೂಪಕ್ಕೆ ತಂದಿರುವುದು ಮಹತ್ವದ ಕಾರ್ಯ. ಬುದ್ಧನ ಒಟ್ಟು ನಲವತ್ತೈದು ವರ್ಷಗಳ ಬೋಧೆಯ ಸಾರ ಸಂಗ್ರಹವೇ '**ತಿಪಿಟಕ**' ಗ್ರಂಥದ ವಸ್ತುವಾಗಿದೆ. ಗದ್ಯ ರೂಪದಲ್ಲಿರುವ ಕೃತಿಯಲ್ಲಿ ಪದ್ಯರೂಪದಲ್ಲಿಯೂ ವಚನಗಳಿವೆ. ವಿವರಣಾ ಪ್ರಧಾನವಾದ ಕಾವ್ಯರೂಪಗಳು, ಸಂಘದ ನಿಯಮಾವಳಿಗಳು ಎಲ್ಲವನ್ನೂ ಒಳಗೊಂಡಿವೆ. ಇದು ಪಿಟಕ ಸಾಹಿತ್ಯವೆಂದೇ ಪ್ರಸಿದ್ಧವಾಗಿದೆ.

ಪಿಟಕ ಸಾಹಿತ್ಯವು ವಿನಯ ಪಿಟಕ, ಸುತ್ತ ಪಿಟಕ, ಅಭಿದಮ್ಮ ಪಿಟಕ – ಎಂದು ಮೂರು ಪಿಟಕಗಳಾಗಿ '**ತಿಪಿಟಕ**' ವೆನಿಸಿದೆ. ಜ್ಞಾನೋದಯಕ್ಕೆ ಹಾಗೂ ಮಾರ್ಗ ದರ್ಶಕ ಗ್ರಂಥಗಳು ವಿನಯ ಪಿಟಕದಲ್ಲಿದ್ದು ಸಂಘದ ನಿಯಮಗಳ ವಿವರಗಳೂ ಇವೆ. ಸುತ್ತಪಿಟಕವು ಬುದ್ಧನ ಉಪದೇಶಗಳ ನೈತಿಕ ತತ್ತ್ವಗಳಿಂದ ಕೂಡಿದೆ. ಅಭಿದಮ್ಮ ಪಿಟಕವು ಮನೋವೈಜ್ಞಾನಿಕ, ತತ್ವಶಾಸ್ತ್ರೀಯ ಬುದ್ಧೋಪ ದೇಶಗಳ ವಿಶ್ಲೇಷಣೆಯ ವಿವರಗಳನ್ನು ಒಳಗೊಂಡಿದೆ.

ತಿಪಿಟಕಗಳಲ್ಲಿಯೇ '**ಸುತ್ತ ಪಿಟಕವು**' ಬುದ್ಧನ ಆಲೋಚನೆಗಳ ಪ್ರಧಾನ ವಿಚಾರ ಸರಣಿಗಳ ಪ್ರವಾಹವಾಗಿದೆ. ಇಲ್ಲಿ ಗದ್ಯ ಪದ್ಯಾತ್ಮಕ ಸಾಹಿತ್ಯವಿದೆ. ಐದು ಪ್ರಮುಖ ನಿಕಾಯಗಳನ್ನು ಒಳಗೊಂಡಿದ್ದು ದೀರ್ಘನಿಕಾಯ, ಮಜ್ಜಿಮ ನಿಕಾಯ, ಸಂಯುಕ್ತ ನಿಕಾಯ, ಅರಿಗುತ್ತರ ನಿಕಾಯ, ಬುದ್ಧಕ ನಿಕಾಯ ಎಂಬ ಭಾಗಗಳಿವೆ. ಇದರಲ್ಲಿ ಬುದ್ಧರ ಪಾಠ, ಧಮ್ಮಪದ, ಉದಾನ, ಇತಿವುತ್ತಕ, ಸುತ್ತ ನಿಪಾತ, ವಿಮಾನವತ್ತು ಪೇತವತ್ತುಗಳ ನಂತರ ಎಂಟನೆಯದು ಥೀರಿಗಾಥಾ. ಒಂಭತ್ತನೆಯದು ಥೇರಿಗಾಥಾ. ಹತ್ತು ಜಾತಕ ಕಥೆಗಳ ಹನ್ನೊಂದು ನಿದ್ದೇನ, ಪಟ ಸಂಚಿಕಾ ಮಗ್ಗ, ಹದಿಮೂರು ಅಪದಾನ, ಹದಿನಾಲ್ಕು ಬುದ್ಧವಂಶ, ಹದಿನೈದು ಚರಿಯಾಪಿಟಕ ಎಂಬ ೧೫ ಭಾಗಗಳಿವೆ. ಇವು ವೈವಿಧ್ಯಮಯ ವಿಷಯಗಳಿಂದ ಕೂಡಿದೆ. ಅದರಲ್ಲಿ ಬುದ್ದಕ ಸಿಕಾಯವು ಉತ್ಕೃಷ್ಟ ವಿಭಾಗವಾಗಿ ಸಂಕೀರ್ಣ ಸ್ವರೂಪದ ಗ್ರಂಥವಾಗಿದೆ. ಅದರಲ್ಲಿ ಥೇರಗಾಥಾ, ಥೇರಿಗಾಥಾ– ಎಂಬ ವಿಭಾಗಗಳು. ಬೌದ್ಧ ಭಿಕ್ಷು, ಭಿಕ್ಷುನಿಯರ ವೈಯಕ್ತಿಕ ನೋವು ನಲಿವು, ಸಾಧನೆ ಸಿದ್ಧಿಗಳ ಸ್ಫೂರ್ತಿದಾಯಕ ಅಭಿವ್ಯಕ್ತಿಯಾಗಿ ಪ್ರಾರಂಭದಲ್ಲಿ ಬಹುಶಃ ಮೌಖಿಕವಾಗಿ ದೊರೆತ ಭಿಕ್ಷುನಿಯರ ಹಾಡುಗಳ ಗಾಥೆಗಳು ಕ್ರಮೇಣ ಮೌರ್ಯ ಅರಸರ ಕಾಲದಲ್ಲಿ ವಿಂಗಡಿಸಲ್ಪಟ್ಟು ಬರಹರೂಪ ಪಡೆದಿವೆ ಎಂದು ತಿಳಿದು ಬರುತ್ತದೆ. ಹೀಗಾಗಿ ಮಹಿಳಾ ವಿಮೋಚನೆಗೆ ಪ್ರಾದು ರ್ಭಾವಕ್ಕೆ ನಾಂದಿ ಹಾಡಿನಂಥ 'ಥೇರಿಗಾಥಾ' ಕೃತಿ ಎಂದು ಅಮೂಲ್ಯ ದಾಖಲೆಯೆನಿಸಿದೆ.

**ಥೇರಿಗಾಥಾ:** ಬೌದ್ಧಧರ್ಮವು ಸ್ತ್ರೀಯರಿಗೂ ಒಂದು ಸ್ವತಂತ್ರ ವ್ಯಕ್ತಿತ್ವವಿದೆ ಎಂಬುದನ್ನು ಅನುಮೋದಿಸಿ ಪಾರ ಮಾರ್ಥಿಕ ಸಿದ್ಧಿಗಾಗಿ ಅವಕಾಶ ನೀಡಿದ್ದು ಬಹುಶಃ ವಿಶ್ವ ಇತಿಹಾಸದಲ್ಲಿ ಒಂದು ಮಹತ್ವದ ಸಂಗತಿ. ಬುದ್ಧ ಸಂದೇಶ ಸಿಂಧುವಿನಲ್ಲಿ ಬಿಂದು ಮಾತ್ರವಾಗಿಯಾದರೂ ಅಡಗಿರುವ ಈ ವಿಶಿಷ್ಟ ಮಹಿಳಾ ಸಾಹಿತ್ಯಕೃತಿ ಅನನ್ಯವೇ ಸರಿ. ಮೂಲ ಪಾಲಿ ಭಾಷೆಯಲ್ಲಿರುವ ಈ ಕೃತಿಯಲ್ಲಿ ಬೌದ್ಧ ಭಿಕ್ಷುನಿಯರ ಜೀವನದ ನೋವು ನಲಿವುಗಳು, ಆಧ್ಯಾತ್ಮ ಸಾಧನೆಯ ವಿನೂತನ ಅನುಭವಗಳು, ಸಾಧನೆಗಳು ದಾಖಲಾಗಿವೆ. ಪಾಲಿ ಭಾಷೆಯಲ್ಲಿರುವ ಈ ಥೇರಿಗಾಥಾದ ಕವನಗಳು ಇಂಗ್ಲೀಷಿಗೂ ಕನ್ನಡಕ್ಕೂ ಭಾಷಾಂತರಗೊಂಡಿವೆ.

**ಬುದ್ಧನ ಸ್ತ್ರೀಪರ ಧೋರಣೆಯ ಹಿನ್ನಲೆ :** ವಾಸ್ತವವಾಗಿ ಗೌತಮಬುದ್ಧ ಸ್ತ್ರೀಯರನ್ನು ತನ್ನ ಸಂಘಕ್ಕೆ ಸೇರಿಸಿಕೊಳ್ಳುವ ಬಗ್ಗೆ ಪರಿಗಣಿಸಿರಲೇ ಇಲ್ಲ. ಆತನು ಅದನ್ನು ವಿರೋಧಿಸಿದ್ದೂ ಉಂಟು. ಸ್ತ್ರೀಯರೂ ಭಿಕ್ಷುನಿಯರಾಗಿ ಸಂಘ ಸೇರಿದರೆ ಸನ್ಯಾಸಿಗಳಾದರೂ ಭಿಕ್ಷುಗಳು ನೈತಿಕವಾಗಿ ದುರ್ಬಲರಾಗಿ ಸಾಧನೆಗೆ ಧಕ್ಕೆ ಉಂಟಾಗಬಹುದು ಎಂಬ ಭಾವನೆಯಿಂದ ಕೂಡಿದ್ದನು. ಆದರೆ ಶಿಷ್ಯ ಆನಂದನು ನೀಡಿದ ವಿವರಣೆಯ ಪ್ರಭಾವದಿಂದ ಸ್ತ್ರೀಯರಿಗೂ ಅರೆಮನಸ್ಸಿನಿಂದಲೇ ಬೌದ್ಧ ಸಂಘದ ಸದಸ್ಯೆಯರಾಗಲು ಅವಕಾಶ ಕೊಟ್ಟನು. ಇದು ಬುದ್ಧನ ಚಿಂತನೆಗಳಲ್ಲಿ ಆದ ಅದ್ಭುತ ಪರಿವರ್ತನೆ ಎಂದರೂ ತಪ್ಪಲ್ಲ. ಆದರೂ ಅವನಿಗೆ ಸ್ತ್ರೀ ಪುರುಷ ಭಿಕ್ಷುಗಳ ಪರಸ್ಪರ ಸಾಹಚರ್ಯದಿಂದ ದೌರ್ಬಲ್ಯ ಗಳುಂಟಾಗಬಹು ದೆಂದು ಶಂಕೆ ಕಾಡಿತ್ತು. ಅದಕ್ಕೆಂದೇ ಈ ಮಾಯಾಭಾವನೆ





ಗೆಲ್ಲಬೇಕೆಂದು ತನ್ನ ಬೋಧನೆ ಗಳಲ್ಲಿ ಪದೇ ಪದೇ ಹೇಳಿರುವುದು ಕಂಡುಬರುತ್ತದೆ. ಒಟ್ಟಾರೆ ಸ್ತ್ರೀ ಪುರುಷರ ನೈತಿಕ, ಆಧ್ಯಾತ್ಮಿಕ ಉನ್ನತಿಗೆ ಬುದ್ಧ ಒತ್ತು ನೀಡಿ ಅನಂತ ಶಾಂತಿಯ ಕಡೆ, ಹುಟ್ಟು ಸಾವುಗಳ ಚಕ್ರದಿಂದ ಬಿಡುಗಡೆ ಯಾಗುವ ಗುರಿ ಸಾಧಿಸಿದರೆ ಜೀವನ ಸಾರ್ಥಕ ಎಂದು ಬೋಧಿಸಿದ್ದಾನೆ.

ಬುದ್ಧ ಸ್ತ್ರೀಯರಿಗೆ ದೀಕ್ಷೆ ಕೊಡುವ ಬಗ್ಗೆ ಹಿಂಜರಿಯು ತ್ತಿದ್ದ ಸಂದರ್ಭದಲ್ಲಿ ಅವನು ಮಹಿಳಾ ವಿಮೋಚನೆ ಯೊಡಗಿನ ಚಿಂತನೆಗಳತ್ತ ಪರಿವರ್ತನೆ ಹೊಂದಲು ಬಲವಾದ ಕಾರಣ ಅವನ ತಾಯಿ ಪಜಾಪತಿ ಗೌತಮಿ, ಈಕೆಯ ದಿಟ್ಟತನ ಹೆಣ್ಣುಮಕ್ಕಳಿಗೂ ಆಧ್ಯಾತ್ಮದ ದೀಕ್ಷೆ ಕೊಡಿಸಲು ನಿರಂತರ ಪ್ರಯತ್ನಶೀಲತೆ ಇಲ್ಲದಿದ್ದಲ್ಲಿ ಬೌದ್ಧಧರ್ಮ ಬಹುಶಃ ಮಹಿಳೆಯರಿಗೆ ಆಧ್ಯಾತ್ಮಿಕ ಅವಕಾಶ ವನ್ನೇ ತೆರೆಯಲು ಮುಂದಾಗುತ್ತಿರಲಿಲ್ಲ ಎಂಬುದು ವಾಸ್ತವತೆ. ಹೀಗಾಗಿ ಮಹಿಳೆಯೇ ತನ್ನ ವ್ಯಕ್ತಿತ್ವದ ಅನನ್ಯತೆಯ ದಾರಿಗಳನ್ನು ಹುಡುಕಿಕೊಳ್ಳುವ ಜಾಗೃತ ಚೈತನ್ಯ ರೂಪಿಣಿ ಪ್ರತಿನಿಧಿ ಬುದ್ಧನ ತಾಯಿ ಪಜಾಪತಿ ಗೌತಮಿ. '**ಪಜಾ**' ಎಂದರೆ ಸಂಘಟಕ. ಜನಸಮೂಹದ '**ಪತಿ**' ಎಂದರೆ ಒಡೆಯ, ನಾಯಕ ಅಥವಾ ನಾಯಕಿ. ಗೌತಮಿ ಸಿದ್ಧಾರ್ಥನ ತಾಯಿ ಮಾಯಾದೇವಿಯ ತಂಗಿ. ಶುದ್ಧೋದನ ರಾಜ ಇಬ್ಬರನ್ನೂ ವಿವಾಹವಾಗಿದ್ದ. ಸಿದ್ಧಾರ್ಥನ ಜನನವಾದ ಏಳು ದಿನಗಳಲ್ಲಿಯೇ ಮಾಯಾದೇವಿ ತೀರಿಕೊಂಡಳು. ಗೌತಮಿ ತನ್ನ ಸ್ವಂತ ಮಗನನ್ನು ದಾಸಿಯರ ಪಾಲನೆಗೆ ಒಪ್ಪಿಸಿ ತಾನು ಸಿದ್ಧಾರ್ಥನ ಪಾಲನೆ ಪೋಷಣೆಗೆ ಮುಂದಾದಳು. ಇವಳ ನಿರ್ವ್ಯಾಜ ಮಮತೆಯ ಬಗ್ಗೆ ಬೌದ್ಧರು ಹಾಗೂ ಸ್ವತಃ ಬುದ್ಧನೂ ಕೃತಜ್ಞತಾಭಾವ ವ್ಯಕ್ತಪಡಿಸಿರುವುದುಂಟು. ಈ ತಾಯಿಯ ಕರುಣೆ, ವಾತ್ಸಲ್ಯಗಳ ಗುಣ ಬುದ್ಧರುಗಳಲ್ಲಿರಬೇಕೆಂದೂ, ಭಿಕ್ಷುನಿ ಯರ ಸಂಘ ಸ್ಥಾಪನೆಗೆ ಪ್ರೇರಣೆ ಉಂಟಾಗಿರುವುದು ಸ್ಪಷ್ಟವೇ ಆಗಿದೆ.

ಸಿದ್ಧಾರ್ಥ ಬುದ್ಧನಾದ ಮೇಲೆ ಗೌತಮಿ ತಾನೂ ದೀಕ್ಷೆ ಬಯಸಿ ವೈರಾಗ್ಯ ಮನೋಭಾವದಿಂದ ಬುದ್ಧನಲ್ಲಿ ಪ್ರಾರ್ಥಿಸಿದಳು. ಆದರೆ ಮೊದಲಿಗೆ ಬುದ್ಧ ಒಪ್ಪಿಗೆ ನೀಡಲಿಲ್ಲ. ಆಕೆ ಪಟ್ಟು ಬಿಡದೆ ತನ್ನಂತೆ ಉತ್ಸುಕವಾಗಿರುವ ಮಹಿಳೆಯರನ್ನು ಸಂಘಟಿಸಿ ಬುದ್ಧನು ಹೋದೆಡೆಗಳಲ್ಲೆಲ್ಲಾ ಹಿಂಬಾಲಿಸಿ ಹೋಗಿ ಬೇಡಿಕೊಂಡಳು. ತಲೆಗೂದಲು ಕತ್ತರಿಸಿ, ಕಾಷಾಯ ವಸ್ತ್ರಧಾರಿಣಿಯಾದರು. ಕಾಡು ಮೇಡೆನ್ನದೆ ನಡೆದು ಪುರುಷರನ್ನೂ ಮೀರಿದ ಸಂಯಮ, ಕಷ್ಟ ಸಹಿಷ್ಣುತೆ, ವೈರಾಗ್ಯಭಾವಗಳು, ದೀಕ್ಷೆ ಪಡೆವ ಅಚಲ ನಿಷ್ಠೆ, ಬುದ್ಧನ ಶಿಷ್ಯರಿಗೆ ಅಚ್ಚರಿ ಉಂಟು ಮಾಡಿದವು. ಶಿಷ್ಯ ಆನಂದನು ಅವರ ದೃಢತೆಯನ್ನು ಬುದ್ಧನಿಗೆ ಮನವರಿಕೆ ಮಾಡಿ ನಂತರ ಭಿಕ್ಷುನಿಯಾಗಲು ಮನವೊಲಿಸಿ ಅನುಮತಿ ಪಡೆದನು. ಈ ಭಿಕ್ಷುನಿಯರಿಗೆ ಎಂಟು ಅಂಶಗಳ ಪಾಲನೆ ಕಡ್ಡಾಯ ಗೊಳಿಸಿದರು. ಅವು '**ಅಷ್ಟವಿಧಪಥ**' ಎಂದೇ ಪ್ರಸಿದ್ಧವಾಗಿವೆ.

ಬುದ್ಧ ಮಹಿಳೆಯರಿಗೆ ಹಲವು ನಿಯಮಗಳನ್ನು ವಿಧಿಸಿದ್ದು, ಅವರ ಜೀವನದ ರೀತಿನೀತಿಗಳಲ್ಲಿ, ಒಂದು ಶಿಸ್ತು ಕ್ರಮವನ್ನು ರೂಪಿಸಿದವು. ಭಿಕ್ಷುನಿಯರು ಆಧ್ಯಾತ್ಮ ಜೀವನದ ಈ ಶಿಸ್ತನ್ನು ಸಂತೋಷದಿಂದ ಪರಿಪಾಲಿಸಿದರು. ಬುದ್ಧನ ದೀಕ್ಷಾ ಆಣತಿಯ ಪ್ರಾರಂಭವೇ ಸಾಧನೆಗೆ ತೊಡಗಿಸಿ ಕೊಂಡರು. ಇದು ವೇದಕಾಲಾನಂತರದ ಇತಿಹಾಸದಲ್ಲೇ ಮಹಿಳೆಯರಿಗೆ ಮತ್ತೊಮ್ಮೆ ಧಾರ್ಮಿಕ ಸ್ವಾತಂತ್ರ್ಯಾವಕಾಶ ವೆನ್ನಬಹುದು.

ಬುದ್ಧನು ವಿಧಿಸಿದ ನಿಯಮಗಳು ಶಿಸ್ತನ್ನು ರೂಪಿಸಿದವು. ಅವುಗಳಲ್ಲಿ ಕೆಲವು ನಿಯಮಗಳು ಭಿಕ್ಷುಗಳ ಪರವಾಗಿಯೇ ಇದ್ದು ನೈತಿಕತೆ ಹಾಗೂ ಆಚರಣೆಗಳನ್ನು ಕುರಿತು ಮಹಿಳೆಯರನ್ನು ಮಾತ್ರ ಎಚ್ಚರಿಸಿದಂತಿದ್ದು ಅವುಗಳನ್ನು ಗಮನಿಸಬಹುದಾಗಿದೆ.

*೧. ದೀಕ್ಷೆ ಪಡೆದು ದೀರ್ಘ ಸಾಧನ ಮಾಡಿದ ಭಿಕ್ಷುನಿಯರೂ ದೀಕ್ಷೆ ಪಡೆದ ಭಿಕ್ಷುಗಳು ಇವರೆಡೆ ಬಂದಾಗ ಎದ್ದು ನಿಂತು ನಮಸ್ಕರಿಸಿ ಗೌರವ ಸಲ್ಲಿಸಬೇಕು.*

*೨. ಯಾವುದೇ ಕಾರಣಕ್ಕೂ ಭಿಕ್ಷುನಿಯರು ಭಿಕ್ಷುಗಳನ್ನು ನಿಂದಿಸಬಾರದು.*

*೩. ಭಿಕ್ಷುನಿಯರು ಯಾವುದೇ ಕಾರಣಕ್ಕೂ ಭಿಕ್ಷುಗಳು ಇರುವ*

***ಕಡೆ ಮಳೆಗಾಲದಲ್ಲಿ ವಾಸಿಸಬಾರದು.***

***೪. ಭಿಕ್ಷುನಿಯರು ಭಿಕ್ಷುಗಳಿಗೆ ದೀಕ್ಷೆ ಕೊಡುವಂತಿಲ್ಲ, ಭಿಕ್ಷುಗಳು ಮಾತ್ರ ಭಿಕ್ಷುನಿಯರಿಗೆ ದೀಕ್ಷೆ ಕೊಡಬಹುದು. ೫. ಪ್ರತಿ ಹದಿನೈದು ದಿನಗಳಿಗೊಮ್ಮೆ ಭಿಕ್ಷುವಿನಿಂದ ಉಪದೇಶ ಪಡೆಯಲು ಭಿಕ್ಷುನಿಯರು ಸಭೆಯ ಸಮಯವನ್ನು ಕೇಳಿ ತಿಳಿಯಬೇಕು.***

***೬. ಭಿಕ್ಷುನಿಯರಿಂದ ಕಾಯಾ, ವಾಚಾ, ಮನಸಾ ಅಪರಾಧ / ತಪ್ಪುಗಳೇನಾದರೂ ನಡೆದರೆ ವಿಚಾರಿಸಲು 'ಪವಾರಣಾ ಕಾರ್ಯಕ್ರಮ' ಏರ್ಪಡಿಸಿದಾಗ ಭಿಕ್ಷುವಿನ ಸಮ್ಮುಖದಲ್ಲಿ ಭಕ್ತಿಯಿಂದ ನಡೆಯಬೇಕು.***

***೭. ಅಪರಾಧ ಮಾಡಿದ ಭಿಕ್ಷುನಿಯರು ಭಿಕ್ಷು ಹಾಗೂ ಭಿಕ್ಷುನಿಯರ ಸಂಘದ ಎದುರು 'ಮನತ್ಯ' ಎಂಬ ಶಿಸ್ತಿನ ಕ್ರಮಕ್ಕೆ ಒಳಗಾಗಬೇಕು. ಇದು ಎಪ್ಪತ್ತೈದು ದಿನಗಳ ಕಾಲ ಜಾರಿಯಲ್ಲಿರುತ್ತದೆ.***

***೮. ಎರಡು ವರ್ಷ ನಿಯಮಗಳ ಬಗ್ಗೆ ತರಬೇತಿ ಪಡೆದ ಭಿಕ್ಷುನಿಯರು ಭಿಕ್ಷುಗಳ ಸಂಘದಿಂದ ಉನ್ನತ ದೀಕ್ಷೆ ಪಡೆಯಬೇಕು.***

ಹೀಗೆ ಭಿಕ್ಷುನಿಯರಿಗೆ ವಿಶೇಷ ನಿಯಮಗಳನ್ನು ಅಳವಡಿಸಿದ ಮೇಲೆ ಅವರಿಗೆ ಸಂಘಕ್ಕೆ ತೊಡಗಿಸಿಕೊಳ್ಳಲು ಅನುಮತಿ ಪಡೆಯಬೇಕಾಗಿತ್ತು. ಇಂತಹ ಸಾಧನೆಗೆ ತಮಗೂ ಅವಕಾಶ ನೀಡಿದ ಬುದ್ಧನ ಬಗ್ಗೆ ಅಪಾರ ಭಕ್ತಿ, ಗೌರವ ತೋರಿದ ಅಂದಿನ ಮಹಿಳೆಯರು ಸಾವಿರಾರು ಸಂಖ್ಯೆಯಲ್ಲಿ ಸಂಘಕ್ಕೆ ಸೇರಿದರು. ಅವರಿಗೆ ನಿರಾಶೆಯ ಬದುಕಿನಲ್ಲಿ ಹೊಸ ಭರವಸೆ ಮೂಡಿತು. ದೀಕ್ಷೆ ಪಡೆದ ಸಂಭ್ರಮ, ಸಾಧನೆಗೆ ಉತ್ಸಾಹದಿಂದ ತೊಡಗಿಸಿ ವಿಶೇಷ ವ್ಯಕ್ತಿತ್ವದ ಅನುಭವವನ್ನು ಹಾಡಿಕೊಂಡು ಅಭಿವೃದ್ಧಿ ನೀಡಿದರು. ಇದೇ '**ಥೇರಿಗಾಥಾ**' ಗೀತ ಸಂಕಲನವಾಗಿ ರೂಪುಗೊಂಡಿತು.

ಬೌದ್ಧ ಧರ್ಮವು ಶೋಷಿತರಾಗಿ, ಸ್ವಾತಂತ್ರ್ಯಾವಕಾಶಗಳಿಲ್ಲದೆ, ಕೌಟುಂಬಿಕವಾಗಿ ನಾನಾ ಸಮಸ್ಯೆಗಳಲ್ಲಿ ತೊಳಲುತ್ತಿದ್ದ ಮಹಿಳೆಯರಿಗೆ ಸಂಘ ಸದಸ್ಯತ್ವ ನೀಡಿ ಆಧ್ಯಾತ್ಮಪಥಕ್ಕೆ ತೊಡಗಿಸಿಕೊಳ್ಳಲು ಎಡೆ ನೀಡಿತು. ಈ ಸಹಾನುಭೂತಿ, ಕರುಣೆಗಳಿಂದ ಹಲವರು ದೊರೆತ ಸ್ವಾತಂತ್ರ್ಯವನ್ನು ಅಕ್ಷರವಿದ್ಯೆ ಕಲಿಯಲೂ ಸಹ ಉಪಯೋಗಿಸಿಕೊಂಡರು, ಹಲವರು ತಮ್ಮ ಜೀವನ ಅನುಭವಗಳನ್ನು ದಾಖಲಿಸಲು ಮೌಖಿಕವಾಗಿ ಗೀತೆಗಳ ರೂಪದಲ್ಲಿ ಹಾಡಲು ಅವಕಾಶವಾಯಿತು. ಇದರಿಂದ ಜೀವನದಲ್ಲಿ ಹೊಸ ಚೈತನ್ಯ ಮೂಡಿತು. ಹಲವರು ಸಂಘದ ಚಟುವಟಿಕೆಗಳಲ್ಲಿ ಪಾಲ್ಗೊಂಡರು. ಪ್ರಚಾರಕಿಯರೂ ಆದರು. ಇದರಿಂದ ಮಹಿಳೆಯರ ಗುಣಸ್ವಭಾವಗಳು ಉತ್ತಮವಾಗಿ ಅನೇಕರು ಧಾರ್ಮಿಕ ಮತ್ತು ದಾರ್ಶನಿಕವಾಗಿ ಮುನ್ನಡೆದರು. ಆಧ್ಯಾತ್ಮ ಸಾಧನೆಗೆ ತೊಡಗಿ ಮಹಾಜ್ಞಾನಿಯಾದ ಮಹಿಳೆಯರನ್ನು ಬೌದ್ಧಗ್ರಂಥಗಳಲ್ಲಿ ವಿಶೇಷವಾಗಿ ದಾಖಲಿಸಿರುವುದೂ ಸಹ ಅಪೂರ್ವ ಸಂಗತಿ.

ಬೌದ್ಧ ಧರ್ಮದ ಆಚರಣೆ, ಆಧ್ಯಾತ್ಮ ಪಥ ಸಾಧನೆಯಲ್ಲಿ ವಿಶೇಷ ಸಾಧನೆ ಮಾಡಿದ ಮಹಿಳೆಯರ ಹೆಸರುಗಳನ್ನು ಅವರು ಪಡೆದ ಅಪೂರ್ವ ಸಾಧನೆಗಳಿಂದಲೇ ಉಲ್ಲೇಖಿಸಿರುವುದು ಗಮನಾರ್ಹ ಅಂಶ. ಸುಧ, ಅನುಪಮ, ಸುಮೇಧ ಮುಂತಾದ ಮಹಾಜ್ಞಾನಿಗಳಾದ ಮಹಿಳೆಯರು ಬೌದ್ಧ ಭಿಕ್ಷುನಿಯರಾಗಿ ತಮ್ಮ ಸಾಧನೆಯ ವಿವಿಧ ಕಾರಣಗಳಿಂದ ಶ್ರೇಷ್ಠತೆಯ ಕೀರ್ತಿ ಪಡೆದಿದ್ದರು. ಅವರಲ್ಲಿ ಅತಿ ಹಿರಿಯಳಾಗಿ ಭಿಕ್ಷುನಿ ಸಂಘದ ಸ್ಥಾಪಕಿ ಪಜಾಪತಿ ಗೌತಮಿ, ಅತಿ ಜ್ಞಾನಿ ಖೇಮಾ, ತಪಶ್ಶಕ್ತಿಗೆ ಹೆಸರಾದ ನಂದಾ, ಶಿಸ್ತಿನ ನಿಯಮಾಚಾರದ ಪಟಾಚಾರ, ಅತಿಮಾನುಷ ಶಕ್ತಿ ಪಡೆದಿದ್ದ ಉಪ್ಪಲವಣ್ಣಾ, ಅತೀಂದ್ರಿಯ ಜ್ಞಾನಿ ಸಕುಲಾ, ಅತಿಶೀಘ್ರ ಸಾಕ್ಷಾತ್ಕಾರ ಪಡೆದ ಭದ್ದಾ ಕುಂಡಲಕೋಸಾ, ಅತಿ ಶಕ್ತಿವಂತೆ ಸೋಣಾ, ಗತಕಾತ ಸ್ಮೃತಿವಂತೆ ಸಮರ್ಥ, ಕಪಿಲನಭದ್ದಾ, ಒರಟು ಬಟ್ಟೆ ಧರಿಸುತ್ತಿದ್ದ ಕಿಸಾ ಗೌತಮ– ಹೀಗೆ ಹಲವರು ಸಾಧಿಸಿದ ಸಿದ್ಧಿಯನ್ನು ಹೆಸರಿಸಿರುವುದು ಈ ಮಹಿಳೆಯರ ಅನನ್ಯ ವ್ಯಕ್ತಿತ್ವದ ಆಯಾಮಗಳನ್ನು ಅರಿಯಲು ಸಹಾಯಕವಾಗುತ್ತದೆ. Pslams of the sisters ಎಂಬ ಆಂಗ್ಲ ಗೀತೆಗಳಿವೆ. ಇದನ್ನು Mrs. Rhys David ಅನುವಾದಿಸಿರುವುದಲ್ಲದೆ, ಇದನ್ನು ಕನ್ನಡಕ್ಕೆ ಡಾ॥ ಮಧುವೆಂಕಾರೆಡ್ಡಿಯವರು ಅನುವಾದಿಸಿ ಕನ್ನಡಿಗರಿಗೆ ಬೌದ್ಧ ಭಿಕ್ಷುನಿಯರ ಕುರಿತು ವಿಚಾರಗಳನ್ನು ತಿಳಿಯಲು ಅವಕಾಶ ನೀಡಿದ್ದಾರೆ.

*





## ಕೃಷಿ ನಡೆದು ಬಂದ ದಾರಿ

-ಈರಯ್ಯ ಕಿಲ್ಲೇದಾರ *

***'ಕೃಷಿಯು ಜನ ಜೀವನದೊಂದಿಗೆ ನೇರ ಸಂಬಂಧ ಹೊಂದಿದ ಸರಳ ಪ್ರಕ್ರಿಯೆ ಆಗಬೇಕು. ಆಗ ದುಡಿಮೆ ಆಶಾದಾಯಕವಾಗಿ ಜೀವ ಸಾರ್ಥಕತೆಗೆ ದಾರಿ ಮಾಡಿಕೊಡುತ್ತದೆ' – ಕೃಷಿ ಋಷಿ, ಪುಕುವೋಕಾ.***

ಭಾರತದ ಕೃಷಿಗೆ ಐದು ಸಾವಿರಕ್ಕೂ ಹೆಚ್ಚು ವರ್ಷಗಳ ಪರಂಪರೆ ಇದೆ. ಇತಿಹಾಸ ಇದೆ. ಆದಿ ಮಾನವನ ಕಾಲದಲ್ಲೂ ಗಡ್ಡೆ-ಗೆಣಸು ತಿಂದು ಮಾನವ ಬದುಕಿದ್ದ. ಆದಿ ಮಾನವನ ಹಂತದಿಂದ, ನಾಗರಿಕ ಮಾನವನಾಗುವ ತನಕ ಕೃಷಿರಂಗ ಹಲವಾರು ಹಂತ ಗಳನ್ನು ದಾಟಿ ಬಂದಿದೆ. ಋಷಿ ಸಂಸ್ಕೃತಿಯಿಂದ, ಆಧುನಿಕ ಸಂಸ್ಕೃತಿಯ ತನಕ ಎಷ್ಟೋ ತಿರುವುಗಳನ್ನು ಕೃಷಿ ಕಂಡಿದೆ. ಜೀವನ ವಿಧಾನವಾಗಿದ್ದ ಕೃಷಿ ಉತ್ಪಾದನಾ ವಿಧಾನವಾಗುವ ಹಂತಗಳ ನಡುವೆ ಅವಾಂತರಗಳ ಸರಣಿಯೇ ಸೃಷ್ಟಿಯಾಗಿದೆ. ಬೊಗಸೆ ತುಂಬ ಬೀಜ ಕಣಜ ತುಂಬಿಸಿದ್ದು ಪವಾಡ ಅಲ್ಲದೆ ಮತ್ತೇನು? ಕೃಷಿ ಒಂದು ಜೀವನ ಸಂಸ್ಕೃತಿ ಆಗಿತ್ತು. ಅದು ವಿಕೃತಿಗೊಂಡು ಉದ್ದಿಮೆ ಆಗಲು ಹೊರಟಿದೆ. 'ಹಳೆಯದೆಲ್ಲ ಬಂಗಾರ' ಎಂಬ ಮಾತಿನಲ್ಲಿ ನಂಬಿಕೆ ಇಲ್ಲದ ಆಧುನಿಕ ರೈತರ ಮನೋಭಾವನೆಯೇ ಬದಲಾಗಿದೆ. ಸದಾ ಹೊಸತನ್ನು ಹುಡುಕುವಲ್ಲಿ ಯಶಸ್ವಿಯಾಗಿ, ಹೊಸತರಲ್ಲಿ ಖುಷಿ ಕಾಣದೆ ಹತಾಶೆಗೊಂಡಿದ್ದಾನೆ ರೈತ. ಇನ್ನೂ ಹೊಸತಾದುದರ ಹುಡುಕಾಟದಲ್ಲಿ ತೊಡಗಿದ್ದಾನೆ.

ಮೊದಮೊದಲು ಶ್ರಮವೇ ಬಂಡವಾಳ ಆಗಿತ್ತು. ಹಿಂದಿನವರು ತಮ್ಮ ತಮ್ಮ ಬುದ್ಧಿಗೆ ತಿಳಿದಂತೆ ಕೃಷಿ ಮಾಡುತ್ತಿದ್ದರು. ಅನುಭವವೇ ಪ್ರಧಾನವಾಗಿತ್ತು. ನದಿ ದಂಡೆಯಲ್ಲಿರುವ ಫಲವತ್ತಾದ ರೆವೆ ಮಣ್ಣಿನಲ್ಲಿ ಬೇಸಾಯ ಆರಂಭ. ಕಟ್ಟಿಗೆಯ ರಂಟೆ(ನೇಗಿಲು) ಉಳುಮೆ ಮಾಡಲು ಬಳಕೆ ಆಗಿತ್ತು. ಬೀಜಗಳನ್ನು ಬೂರಿಗೆಯಿಂದ ಬಿತ್ತದೆ ಚೆಲ್ಲಾಪಿಲ್ಲಿಯಾಗಿ 'ಭಳಿ' ಒಗೆಯುತ್ತಿದ್ದರು. ನಂತರ ಕುಂಟೆ ಖೂರಿಗೆ, ಎಡೆಕುಂಟೆಗಳು ಮತ್ತು ಕಬ್ಬಿಣದ ನೇಗಿಲುಗಳು ಉಳುಮೆ ಮಾಡಲು ಬಳಕೆಯಾಗತೊಡಗಿದವು. ಭೂಮಿ, ಮಳೆ, ಗಾಳಿ, ಬಿಸಿಲು, ಪರಿಸರ, ಬೆಳದಿಂಗಳು ಎಲ್ಲದರಲ್ಲೂ ದೈವತ್ವ ಕಂಡಿದ್ದರು. ಭೂಮಿ, ಬೆಳೆ, ಬೀಜ ಎಲ್ಲವೂ ದೇವರು ಮನುಷ್ಯಗಿತ್ತ ದೇಣಿಗೆಗಳು ಎಂದು ಭಾವಿಸಿದ್ದರು. ಎತ್ತು ಎಮ್ಮೆ ಆಕಳುಗಳೊಡನೆ ಭಾವನಾತ್ಮಕ ಸಂಬಂಧ ಹೊಂದಿದ್ದರು. ಮೂಕ ಪ್ರಾಣಿಗಳಿಗೆ ಹೆಸರಿಟ್ಟು ಕರೆಯುತ್ತಿದ್ದರು. ಅವುಗಳ ಭಾಷೆ ರೈತನಿಗೆ ಅರ್ಥವಾಗುತ್ತಿತ್ತು. ಮಾರುಕಟ್ಟೆಗಳೇ ಇರಲಿಲ್ಲ. ಕಾಳುಕಡಿಗಳನ್ನು ವಿನಿಮಯದ ಮೂಲಕ ಕೊರತೆ ನೀಗಿಸಿಕೊಳ್ಳುತ್ತಿದ್ದರು. ಕೃಷಿಗೆ ಪೂರಕವಾದ ಕೃಷಿ ಪರಿಕರಗಳು, ರೈತರ ಅಗತ್ಯಗಳನ್ನು ಹಳ್ಳಿಯಲ್ಲೇ ಪೂರೈಸಿಕೊಳ್ಳುತ್ತಿದ್ದರು. ಬಡಿಗ, ಕಂಬಾರ, ಕುಂಬಾರ, ನೇಕಾರ ಹಡಪದ ಮೊದಲಾದ ಜನಾಂಗದವರೆಲ್ಲ ಕೃಷಿಗೆ ಪೂರಕವಾದ ಕಸುಬುಗಳನ್ನು ಮಾಡುತ್ತಿದ್ದರು. ಪ್ರತಿಫಲವಾಗಿ ಆಹಾರ ಧಾನ್ಯಗಳನ್ನು ಪಡೆಯುತ್ತಿದ್ದರು.

ನೆರೆ-ಹೊರೆಯ ರೈತರು ಬಿತ್ತನೆ ಕೊಯ್ಲು ಮತ್ತು ಒಕ್ಕಣೆಯಂತಹ ಸಂದರ್ಭದಲ್ಲಿ ಮುಯ್ಯದಕಮತಾ ಮಾಡುತ್ತಿದ್ದರು. ಅವರ ಕೃಷಿ ಕೆಲಸ ಕಾರ್ಯಕ್ಕೆ ಇವರು ಮೂರು ಜನ ಮೂರು ದಿನ ಹೋದರೆ, ಇವರ ಕೃಷಿ ಕೆಲಸ ಕಾರ್ಯಕ್ಕೆ ಅವರು ಮೂರು ಜನ ಮೂರು ದಿನ ಬರುತ್ತಿದ್ದರು. ಪರಸ್ಪರರು ಸಹಕಾರದಿಂದ ಸಹಬಾಳ್ವೆ ನಡೆಸುತ್ತಿದ್ದರು. ಯಾವುದೇ ತಾರತಮ್ಯ ಮಾಡುತ್ತಿರಲಿಲ್ಲ. ರೈತನೊಬ್ಬನ ಹೊಲ ಬೆಳೆಯದಿದ್ದರೆ ಬೆಳೆದ ಇತರ ರೈತರು ಕಡ ಕೊಟ್ಟು ನೆರವಾಗುತ್ತಿದ್ದರು. ಹೀಗಾಗಿ ಇಡೀ ಹಳ್ಳಿಯ ಸ್ವಾಸ್ಥ್ಯವು ಸಾಧ್ಯವಾಗಿತ್ತು. ಸಾಮರಸ್ಯವೂ ಇತ್ತು. ರಾತ್ರಿ ಆಕಾಶ ನೋಡಿ ಈ ದಿವಸ ಇಂಥ ನಕ್ಷತ್ರ ಇದೆ. ಇಷ್ಟು ದಿನಕ್ಕೆ ಇಂಥ ನಕ್ಷತ್ರ, ಅಮಾವಾಸ್ಯೆ ಮತ್ತು ಹುಣ್ಣಿಮೆಗಳು ನಿರ್ದಿಷ್ಟವಾಗಿ ಬರುವುದನ್ನು ಹೇಳುವ ಖಗೋಲಶಾಸ್ತ್ರವನ್ನು ಅರಿತಿದ್ದರು. ಮಳೆ ನಕ್ಷತ್ರಗಳನ್ನು ಮಳೆ ಆಗುವ, ಆಗದಿರುವ, ಬರಗಾಲ ಮತ್ತು ಅತಿವೃಷ್ಟಿ ಕುರಿತು ನಿಖರವಾಗಿ ಏನೂ ಅಕ್ಷರ ಕಲಿಯದ ರೈತರು ಹೇಳುತ್ತಿದ್ದರು.

* 'ಈನಿಂಕಿ', ಕವಿತಾ ಪ್ರಕಾಶನ, ಗುಡಿಕಟ್ಟಿ, ಅಂಚೆ ಕ್ರ. 591 104. ಬೆಳಗಾವಿ ಜಿಲ್ಲೆ.

ಬೀಜ, ಹೊಲ, ಮಳೆಗಾಳಿ ಮತ್ತು ಋತುಮಾನಗಳ ಮೇಲೆ ನಂಬಿಕೆ ಮತ್ತು ಶ್ರದ್ಧೆ ಇಟ್ಟಿದ್ದರು. ನಂಬಿಕೆಯ ಬಲದ ಮೇಲೆ ಶ್ರಮಕ್ಕೆ ತಕ್ಕ ಫಲ ದೊರಕುವುದೆಂಬ ಖಾತ್ರಿಯೂ ಅವರಿಗಿತ್ತು. ಆಕಳು ಹಾಲು ಕೊಡುವ ಯಂತ್ರ ಆಗಿರಲಿಲ್ಲ. ಎತ್ತು ಗಳೆ ಹೊಡೆಯುವ ಪ್ರಾಣಿ ಆಗಿರಲಿಲ್ಲ. ಬಂದ ಫಸಲನ್ನು ತೂಗಿ ನೋಡಿದವರಿಲ್ಲ. ಅಳೆದು ಬೆಲೆ ಕಟ್ಟಿದವರಿಲ್ಲ. ಸಮೃದ್ಧಿಯೂ ಇತ್ತು. ಬೆಳೆದ ಫಸಲಿನಲ್ಲೇ ಆರೋಗ್ಯ ಮತ್ತು ಶಕ್ತಿಸಾಮರ್ಥ್ಯ ಪಡೆಯುತ್ತಿದ್ದರು.

'ವಿಜ್ಞಾನ ತನ್ನ ವೈಜ್ಞಾನಿಕ ಜ್ಞಾನದ ಮೂಲಕ ಅರಿತಿರುವುದು ಮೃತ ಪ್ರಕೃತಿಯನ್ನಷ್ಟೆ. ಆತ್ಮವಿಲ್ಲದ ದೇಹದಲ್ಲಿರುವ ಭೂತವನ್ನಷ್ಟೇ'. ಪಿಕುವೋಕಾ ಹೇಳಿದಂತೆ ಸಾವಿರಾರು ವರ್ಷಗಳ ಕೃಷಿಯಲ್ಲಿ ವಿಜ್ಞಾನ ಹೊಕ್ಕು ಬಳಕೆಯಾಗಿ ಐವತ್ತು ವರ್ಷಗಳಲ್ಲಿ ಇಡೀ ಕೃಷಿ ಪರಂಪರೆಯನ್ನೇ ನಾಶ ಪಡಿಸಿತು. ನಿಸರ್ಗದೊಡನೆ ಹೊಂದಿಕೊಂಡು ಮಾಡುತ್ತಿದ್ದ ಕೃಷಿಯನ್ನು ನಿಸರ್ಗಕ್ಕೆ ವಿರುದ್ಧವಾಗಿ ಮಾಡಲು ಹಚ್ಚಿದ್ದು ವೈಜ್ಞಾನಿಕ ಕೃಷಿ. ಅದಕ್ಕೆ ಹಸಿರು ಕ್ರಾಂತಿ ಎಂದೂ ಕರೆಯಲಾಗುತ್ತಿದೆ. ರೈತರು ಕೃಷಿ ಮತ್ತು ನಿಸರ್ಗಗಳ ನಡುವೆ ಕಂದರ ದೊಡ್ಡದಾಗಿದ್ದು, ಕೃಷಿರಂಗದಲ್ಲಾದ ಹೊಸ ಆವಿಷ್ಕಾರಗಳು ಮತ್ತು ತಂತ್ರಜ್ಞಾನ. ಶ್ರಮವೇ ಬಂಡವಾಳ ಆಗಿದ್ದ ಕೃಷಿಯಲ್ಲಿ ಹಣವೇ ಪ್ರಧಾನ ಎನಿಸಿತು. ಬೀಜ, ರಸಗೊಬ್ಬರ, ರಾಸಾಯನಿಕ ಕೀಟನಾಶಕಗಳು, ಒಕ್ಕುವ, ಉಳುಮೆ ಮಾಡುವ ಯಂತ್ರಗಳು ಹಣವಿಲ್ಲದೆ ಪಡೆಯುವುದು ಆಸಾಧ್ಯ ಎನಿಸಿತು. ರೊಟ್ಟಿಯನ್ನು ಮರೆತು ಹೋಟೆಲ್ ದೋಸೆಗೆ ಮರುಳಾಗಿ ತಾಳ್ಮೆಯನ್ನು ನೆಮ್ಮದಿಯನ್ನೂ ಕಳೆದುಕೊಂಡ ರೈತರು ಹತಾಶೆ ಗೊಂಡರು. ಹೊಲದ ಮಣ್ಣು ರೈತರ ಬದುಕಿನ ಸಾರ ಎನಿಸಿದ್ದು ತಿರುವು ಮುರುವಾಯಿತು. ಹೆಚ್ಚು ಖರ್ಚು ಮಾಡಿದಾಗಲೇ ಹೆಚ್ಚು ಉತ್ಪನ್ನ ಎಂಬ ತರ್ಕಕ್ಕೆ ರೈತರು ಬಂದು ನಿಂತರು.

ಬುದ್ಧಿಮಟ್ಟದ ಕೃಷಿ, ಹಸಿರು ಕ್ರಾಂತಿಯ ಕೃಷಿ ಮತ್ತು ಜಾಗತೀಕರಣದ ಪ್ರಭಾವಿತ ಕೃಷಿ, ಮೂರು ಕಾಲಘಟ್ಟಗಳಲ್ಲಿ ಹಲವಾರು ಬದಲಾವಣೆಗಳಾಗಿವೆ. ಹೊಸ ಚಿಗುರಿಗೆ ಹಳೆ ಬೇರು ಅಗತ್ಯ. ಆದರೆ ಬೇರು ಸಹಿತ ಕಿತ್ತು ಹಾಕಿ ಹೊಸ ಕೃಷಿ ತನ್ನ ಅಸ್ತಿತ್ವ ಉಳಿಸಿಕೊಳ್ಳಲು ರೈತರ ಅಸ್ತಿತ್ವವನ್ನೇ ಬುಡಮೇಲು ಮಾಡಲು ಬಂದ ಹಾಗಿದೆ. ಕೃಷಿಯಲ್ಲಿ ಬಂದ ಹೊಸ ಹೊಸ ಚಿಂತನೆಗಳು, ತಂತ್ರಜ್ಞಾನ, ಆವಿಷ್ಕಾರಗಳು ಮತ್ತು ವಿಜ್ಞಾನಗಳು ರೈತರನ್ನು ಪರಾವಲಂಬಿಯಾಗಿಸುವುದರಲ್ಲಿ ಯಶಸ್ವಿಯಾಗಿವೆ. ತನ್ನತನ ಮರೆತು ಅನ್ಯರದೇ ತನ್ನ ದೆಂದು ಅಪ್ಪಿಕೊಳ್ಳಲು ಹೋದ ರೈತನಿಗೆ ಹಲವಾರು ರೋಗಗಳು ತಗುಲಿದುವು. ಮನುಷ್ಯ ಮಾತ್ರವಲ್ಲದೆ ಬೆಳೆಗಳಿಗೂ ರೋಗಬಾಧೆ ಕೀಟಬಾಧೆ ಹೆಚ್ಚಾಯಿತು. ತಾಯಿಯ ಒಡಲು ಅನಾರೋಗ್ಯಕ್ಕೆ ತುತ್ತಾಯಿತು. ತಾಯಿಯ ಎದೆ ಹಾಲು ನಂಜಾಯಿತು. ಅನ್ನದಾತ ಒಂದು ಕ್ವಿಂಟಾಲ್ ಬೆಳೆಯುತ್ತಿದ್ದ ಹೊಲದಲ್ಲಿ ಹತ್ತು ಕ್ವಿಂಟಾಲ್ ಬೆಳೆದ. ಒಂದೇ ಚೀಲ(ಕ್ವಿಂಟಾಲ್) ಬೆಳೆದಾಗ ಅವನಿಗಿದ್ದ ನೆಮ್ಮದಿ, ಸುಖ ಸಂತೋಷಗಳು ಹತ್ತು ಪಟ್ಟು ಹೆಚ್ಚಾದರೂ ಸಿಗಲಿಲ್ಲ. ಆ ದಿನಗಳನ್ನು ನೆನಪಿಸಿಕೊಳ್ಳಲು, ಈಗಿನ ಸ್ಥಿತಿಯನ್ನು ವಿಮರ್ಶೆ ಮಾಡಲೂ ರೈತರಿಗೆ ಪುರುಸೊತ್ತಿಲ್ಲ.

ರೈತರ ಮನೋಭಾವನೆಯನ್ನು ಕೃಷಿಯ ಪರಿಭಾಷೆಯನ್ನು ಬದಲಾಯಿಸುವಲ್ಲಿ ಯಶಸ್ವಿಯಾದ ಆಧುನಿಕ ವಿಜ್ಞಾನ ರೈತರನ್ನು ಶ್ರೀಮಂತರನ್ನಾಗಿಸಲಿಲ್ಲ. ಸ್ವಾವಲಂಬಿ ಮಾಡಲಿಲ್ಲ. ಕಾರಿನಲ್ಲಿ ವಿಹರಿಸುವಂತೆ ಮಾಡಲಿಲ್ಲ. ಯಾರ್ಯಾರನ್ನೋ ಶ್ರೀಮಂತರನ್ನಾಗಿಸಲು, ಅಲ್ಪಶ್ರಮದ ಜನರಿಗೆ ಆರ್ಥಿಕ ಆದಾಯ ತಂದುಕೊಡುವಲ್ಲಿ ಎಲ್ಲ ಬೆಳವಣಿಗೆಗಳು ಕೈಜೋಡಿಸಿದುವು. ಇಂದಿನ ಅಗತ್ಯಗಳಿಗೆ ಹೆಚ್ಚು ಬೆಳೆಯ ಬೇಕು. ಹೆಚ್ಚು ಖರ್ಚು ಮಾಡಬೇಕು. ಆದರೆ ಹೆಚ್ಚಿನ ಆದಾಯವನ್ನಾಗಲಿ ಲಾಭವನ್ನಾಗಲಿ ನಿರೀಕ್ಷಿಸುವಂತಿಲ್ಲ. ಯಾವುದೇ ಒಂದು ಬೆಳೆ ತೆಗೆಯಲು ಕನಿಷ್ಠ ನಾಲ್ಕು ತಿಂಗಳು ಬೇಕು. ಕಠಿಣ ಪರಿಶ್ರಮ ಬೇಕು. ಬಂಡವಾಳ ಹಾಕಬೇಕು. ಅನುಕೂಲಕರ ವಾತಾವರಣ, ಮಳೆ, ಬಿಸಿಲು ಬೇಕು. ಬಂದ ಇಳುವರಿ ಒಕ್ಕಿ ಮಾರಾಟ ಮಾಡಿದಾಗ ಕ್ವಿಂಟಾಲ್‌ಗೆ ಎರಡು ಸಾವಿರ ಸಿಗುತ್ತದೆ. ಅದೇ ವ್ಯಾಪಾರಿ ಎಂಟತ್ತು ದಿನಗಳಲ್ಲಿ ಕಾಳು ಮಾಡಿ ಬೇಳೆ ಮಾಡಿ ಮಾರುತ್ತಾನೆ. ಆಗ ಆತನ ರೈತನ ಉತ್ಪನ್ನದಿಂದಲೇ ಕೈಕೆಸರಾಗದೆ ರೈತ ಪಡೆದುದಕ್ಕಿಂತ ಹೆಚ್ಚಿನ ಧಾರಣೆಗೆ ಮಾರಾಟ ಮಾಡುತ್ತಾನೆ. ಆತನಿಗೆ ದುಪ್ಪಟ್ಟು ಲಾಭ ಆಗುತ್ತದೆ. ಇದು ಕೃಷಿ ನಡೆದು ಬಂದ ದಾರಿ. ಓಟದ ವೇಗ ಪಡೆಯಿತಾದರೂ ರೈತರು ಸುಸ್ತಾಗಿದ್ದಾರೆ. ಮುಂದೆ ವೇಗವಾಗಿ ಓಡಲು ಸಾಮರ್ಥ್ಯ ಇಲ್ಲ, ಹಿಂದೆ ಬರಲು ಮನಸ್ಸು ತಯಾರಿಲ್ಲ.

*





## ಮಹಿಳೆಯರ ಜೀವನ ನಿರೀಕ್ಷೆ ವರ್ಷಗಳ ಅವಲೋಕನ *

–ಸ.ರಾ. ಸುಳಕೂಡೆ

ಜೀವನ ಗುಣಮಟ್ಟವನ್ನು ಆಧಾರವಾಗಿಟ್ಟುಕೊಳ್ಳುವಿಕೆಯು ಇಂದಿನ ಮಾನವ ಅಭಿವೃದ್ಧಿಯ ಗುರಿಯಾಗಿದೆ. ಮಾನವ ಅಭಿವೃದ್ಧಿ ಅಳತೆಗೋಲುಗಳಲ್ಲಿ **'ದೀರ್ಘಾಯುಷ್ಯ'** ಒಂದು ಪ್ರಮುಖ ಅಂಶವಾಗಿದೆ. ಅರ್ಥಶಾಸ್ತ್ರಜ್ಞ ಡಾ|| ಅಮರ್ತ್ಯಸೇನರ ಪ್ರಕಾರ ಮನುಷ್ಯನಿಗಾಗಿ ವಿನಹಃ ಮತ್ತೊಂದಕ್ಕಲ್ಲ. ಅಭಿವೃದ್ಧಿಯು ಮಾನವನ ಬದುಕಿಗೆ ಸಂಬಂಧಿಸಿದ ಒಂದು ಪ್ರಕ್ರಿಯೆ. ಮಾನವ ಬದುಕು ಉತ್ತಮಗೊಳ್ಳುವ ಪ್ರಕ್ರಿಯೆಯೇ ಅಭಿವೃದ್ಧಿ. ಆದ್ದರಿಂದ ಮಾನವ ಅಭಿವೃದ್ಧಿಯು ಇಂದು ಯೋಜನೆಯ ಆದ್ಯತೆಯಾಗಿದೆ. ಅದರಲ್ಲಿ ಮಹಿಳೆಯರ ಅಭಿವೃದ್ಧಿಗೆ ಮಹತ್ವದ ಸ್ಥಾನ ನೀಡಲಾಗಿದೆ.

ಮಹಿಳೆಯರು ಸ್ಥಿತಿ-ಗತಿಗಳು ಸಾಮಾಜಿಕ ಮತ್ತು ಕುಟುಂಬ ಜೀವನದ ಯಥಾವತ್ತಾದ ನಕಲುಗಳಾಗಿವೆ. ಯಾವ ಕುಟುಂಬದಲ್ಲಿ ಮಹಿಳೆಯರಿಗೆ ಯೋಗ್ಯ ಸ್ಥಾನಮಾನ, ಗೌರವ ವೈದ್ಯಕೀಯ ಸೇವೆ ಆಹಾರ ಭದ್ರತೆಯೊಂದಿಗೆ ಸಹಜೀವನದ ವರ್ತನೆ ಇರುತ್ತದೆಯೋ ಆ ಕುಟುಂಬದ ಹೆಣ್ಣುಮಕ್ಕಳು ಆತಂಕವಿಲ್ಲದೆ ಬದುಕುತ್ತಿದ್ದಾರೆ. ಬದುಕುವ ಕಲೆಯಿಂದ ಇತರರಿಗೂ ಸಹಾಯಕರೂ ಆಗುತ್ತಾರೆ. ಮೂಲತಃ ಹೆಣ್ಣು ಮಗುವನ್ನು ಬೆಳೆಸುವಲ್ಲಿ ಕುಟುಂಬದ ವರ್ತನೆ ವ್ಯವಹಾರ ತಾರತಮ್ಯದಿಂದಲೇ ಕೂಡಿಕೊಂಡಿದೆ. ಮಹಿಳೆಯಾಗಿರುವ ತಾಯಿಯೂ ಹೆಣ್ಣು ಮಗುವಿನ ಲಾಲನೆ ಪಾಲನೆಯೊಡನೆ ತೀವ್ರಾಸಕ್ತಿ ಹೊಂದದಿರುವುದು ಗಮನಾರ್ಹ ಸಂಗತಿಯಾಗಿದೆ.

ಮಹಿಳೆಯವರ ಸ್ಥಾನಮಾನವನ್ನು ಉತ್ತಮ ಸ್ಥಿತಿಗೆ ತರಲಾರದೆ ಇಂದು ಪ್ರಗತಿಯ ವೇಗವನ್ನು ಮುನ್ನಡೆಸಲು ಸಾಧ್ಯವಿಲ್ಲೆಂಬ ಸಂಗತಿಯು ಎಲ್ಲ ಅಧ್ಯಯನದಿಂದ ಹೊರ ಹೊಮ್ಮಿದೆ. ಮಹಿಳೆಯರ ಪಾಲಿಗಾರಿಕೆವಿಲ್ಲದೆ ಫಲಪ್ರದವಾದ, ಫಲದಾಯಕವಾದ ಬದುಕು ಕಟ್ಟಿಕೊಳ್ಳಲು ಸಾಧ್ಯವಿಲ್ಲೆಂಬ ಸಂದೇಶ ಎಲ್ಲೆಡೆ ಕೇಳಿ ಬರುತ್ತಲಿದೆ. ಜಾಗತಿಕ ಮಟ್ಟದಲ್ಲಿ ಮಹಿಳೆಯರನ್ನು ನಿರ್ಲಕ್ಷ್ಯಸಿದಂತೆ, ಮಹಿಳಾ ಸಬಲೀಕರಣದ ಕಾನೂನು, ಅಧ್ಯಯನಗಳು ಸಾರ್ವತ್ರಿಕಗೊಂಡಿದೆ. ಹೀಗಾಗಿ ಮಹಿಳೆಯರನ್ನು ಸಶಕ್ತಗೊಳಿಸುವಿಕೆಗೆ, ಸಮಾನತೆ ದೊರೆಯುವಿಕೆಗೆ ಮತ್ತು ಎಲ್ಲ ಕ್ಷೇತ್ರಗಳಲ್ಲಿ ಸಕ್ರಿಯವಾಗಿ ತೊಡಗುವಂತೆ ಮಾಡುವ ಪರಿಸರ ನಿರ್ಮಾಣಕ್ಕೆ ಆದ್ಯತೆ ದೊರೆಯುತ್ತಲಿದೆ. ಮಾನವ ಅಭಿವೃದ್ಧಿಯ ಮುನ್ನೋಟ ಮತ್ತು ಕಾರ್ಯಕ್ರಮಗಳಲ್ಲಿ ಮಹಿಳಾ ಸಬಲೀಕರಣಕ್ಕೆ ಅಗ್ರ ಸ್ಥಾನಮಾನ ಕೊಡಲಾಗಿದೆ. ಮಹಿಳಾ ಸಬಲೀಕರಣವೇ ಜನಾಂಗದ ಉನ್ನತಿಗೆ ಆಧಾರವೆಂಬ ಅನೇಕ ಮಹನೀಯರ ಅಭಿಮತವಾಗಿದೆ. ಅಂಥ ಕೆಲ ಅಭಿಪ್ರಾಯಗಳನ್ನು ಇಲ್ಲಿ ಆಯ್ದು ಕೊಡಲಾಗಿದೆ.

* ಮಹಿಳೆಯರ ಸ್ಥಿತಿ ಸುಧಾರಣೆಯಾಗದೆ ಜಗತ್ತಿನ ಕಲ್ಯಾಣಕ್ಕೆ ಅವಕಾಶವೇ ಇಲ್ಲ. ಹಕ್ಕಿಗೆ ಒಂದೇ ರೆಕ್ಕೆಯಿಂದ ಹಾರಲು ಸಾಧ್ಯವಿಲ್ಲ – **ಸ್ವಾಮಿ ವಿವೇಕಾನಂದರು.**

* ಮಹಿಳೆಗೆ ಬೇಕಾಗಿರುವುದು ದಾನವಲ್ಲ. ಅವಳಿಗೆ ಬೇಕಿರುವುದು ನ್ಯಾಯ – **ಮೇರಿ ವುಲ್ ಸ್ಟೋಲ್ ಕ್ರಾಫ್ಟ್**

ಮಹಿಳೆಗೆ ಅಧಿಕಾರ ಆಕೆಯ ಸಶಕ್ತಗೊಳಿಸುವಿಕೆ ಎಂಬುದು ಕನಿಷ್ಠ ಮೂರು ತತ್ವಗಳನ್ನು ಒಳಗೊಳ್ಳಬೇಕಾಗಿದೆ. ಮೊದಲನೆಯದಾಗಿ ಹೆಣ್ಣು ಮತ್ತು ಗಂಡಿನ ನಡುವೆ ಸಮಾನತೆ ಸಾಧಿಸಲು ಕಾನೂನು, ಆರ್ಥಿಕ, ರಾಜಕೀಯ ಅಥವಾ ಸಾಂಸ್ಕೃತಿಕ, ಹೀಗೆ ಯಾವುದೇ ಅಡೆತಡೆ ಇದ್ದರೆ ಅದನ್ನು ವ್ಯಾಪಕ ಸುಧಾರಣೆ ನೀತಿ ಮತ್ತು ದೃಢಸಂಕಲ್ಪ ಶಕ್ತಿಯ ಮೂಲಕ ತೊಡೆದು ಹಾಕಬೇಕು. ಎರಡನೆಯದಾಗಿ ಮಹಿಳೆಯರನ್ನು ಬದಲಾವಣೆಯ ದೂತರು ಹಾಗೂ ಫಲಾನುಭವಿಗಳು ಎಂದು ಪರಿಗಣಿಸಬೇಕು. ಮಹಿಳೆಯರ ಸಾಮರ್ಥ್ಯದಲ್ಲಿ ನಂಬಿಕೆಯಿಟ್ಟು, ಬಂಡವಾಳ ಹೂಡುವುದು, ಅವರ ಆಯ್ಕೆಗೆ, ಅಭಿಪ್ರಾಯಗಳಿಗೆ ಮನ್ನಣೆ ನೀಡುವುದು,

* 1319, ಶಿವಪ್ರಸಾದ, ಶ್ರೀ ಬಸವೇಶ್ವರ ಬಡಾವಣೆ, ರಾಮತೀರ್ಥ ನಗರ, ಬೆಳಗಾವಿ ಜಿಲ್ಲೆ-590 016.

ಇಂದಿನಾಗತ್ಯ. ಇದರಿಂದ ಆರ್ಥಿಕ ಅಭಿವೃದ್ಧಿ ಹಾಗೂ ಸರ್ವತೋಮುಖ ಬೆಳವಣಿಗೆ ಸಾಧ್ಯವಾಗುತ್ತದೆ. ಮೂರನೆಯದಾಗಿ ಮಹಿಳೆ ಮತ್ತು ಪುರುಷರಿಬ್ಬರೂ ವ್ಯಾಪಕ ಅವಕಾಶಗಳನ್ನು ಒಳಗೊಂಡು ಮಾದರಿ – **ಸುಮಿತ್ರಾ ಮಹಾಜನ್.**

* ಶಿಕ್ಷಣವಿಲ್ಲದೆ ಮಹಿಳೆಯರ ಬದುಕು ಎಷ್ಟು ಬವಣೆಯಿಂದ ಕೂಡಿರುತ್ತದೆ ಊಹೆಗೂ ನಿಲುಕದು. 'ಅನಕ್ಷರತೆ' 20ನೇ ಶತಮಾನದ ಅಂತ್ಯದಲ್ಲಿ ಮನುಕುಲ ವನ್ನು ಬಾಧಿಸುತ್ತಿರುವ ಅತಿ ದೊಡ್ಡ ಪೀಡೆಯಾಗಿದೆ. 'ಅನಕ್ಷರತೆ'ಯಿಂದ ಲಕ್ಷಾಂತರ ಜನ ವಯಸ್ಕರು ತೊಂದರೆ ಪಡುತ್ತಿದ್ದಾರೆ. ಅವರು ದುರ್ಬಲ ಸ್ಥಿತಿಯಲ್ಲಿದ್ದು, ಬಡತನದಲ್ಲಿ ತೊಳಲಾಡುತ್ತಿದ್ದಾರೆ. ಅತಿ ಹೆಚ್ಚು ಸಂಖ್ಯೆಯ ಅನಕ್ಷರಸ್ಥರು ಬಡವರಾಗಿದ್ದಾರೆ. ಈ ನಿರಕ್ಷರಿಗಳಲ್ಲಿ ಸಣ್ಣ ವಯಸ್ಸಿನ ಹುಡುಗಿಯರು ಮತ್ತು ಮಹಿಳೆಯರೇ ಅಧಿಕ ಸಂಖ್ಯೆಯಲ್ಲಿದ್ದಾರೆ. ಇಂದು ಪ್ರಾಥಮಿಕ ಶಾಲೆಗೆ ಹೋಗ ಬೇಕಾದ ವಯಸ್ಸಿನ 1.25 ಕೋಟಿ ಮಕ್ಕಳು ಶಾಲೆಯನ್ನು ಕಂಡಿಲ್ಲ. ಇಂತಹ ಮಕ್ಕಳಲ್ಲಿ ಹುಡುಗಿಯರೇ ಅತಿ ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಹೆಣ್ಣು ಮಗಳು ಓದು–ಬರಹ ಬಲ್ಲವಳಾದರೆ ಅವಳ ಜೀವನ ಹಸನಾಗುತ್ತದೆ. ಅವಳು ಹೆಚ್ಚು ಸುಖ–ಸಂತೋಷಗಳಿಂದಿರುತ್ತಾಳೆ. ಅವಳ ಪರಾವಲಂಬನೆ ಕಡಿಮೆಯಾಗುತ್ತದೆ. ಆದ್ದರಿಂದ ನಿರಕ್ಷರತೆ ಯನ್ನು ನಿರ್ಮೂಲನೆ ಗೊಳಿಸುವುದು ಬಹಳ ಮುಖ್ಯ– **ಆಕ್ಷನ್ ಫಾರ್ ಇಂಟರ್ ನ್ಯಾಷನಲ್ ನೌವ್ ಬ್ರೇಕ್ ದಿ ಸೈಕಲ್ ಆಫ್ ಪಾವರ್ಟಿ.**

* ಶಿಕ್ಷಣದ ಮೂಲಕ ಮಹಿಳೆಯರಿಗೆ ಶಕ್ತಿ ಮತ್ತು ಸ್ಥೈರ್ಯ ಗಳನ್ನು ನೀಡಲು ಭಾರತ ಅನೇಕ ಕ್ರಮಗಳನ್ನು ಕೈಗೊಂಡಿದೆ. ಆದರೂ ನಾವು ಇತರ ದೇಶಗಳ ಮಟ್ಟವನ್ನು ಇನ್ನು ಮುಟ್ಟಿಲ್ಲ. ಮಹಿಳೆಯರಿಗೆ ದ್ವಿತೀಯ ದರ್ಜೆಯ ಸ್ಥಾನಮಾನ ಇರುವುದಕ್ಕೆ ಸಂಪ್ರದಾಯಕ್ಕೆ ಕಟ್ಟು ಬಿದ್ದಿರುವ ನಮ್ಮ ಜನರ ಮನೋಭಾವನೇ ಕಾರಣ. ಸಂಪ್ರದಾಯಕ್ಕೆ ಶರಣು ಹೋಗಿರುವ ಈ ಜನರ ಮನೋಭಾವ ಬದಲಾದಲ್ಲಿ ಮಾತ್ರ ನಾವೂ ಸಹ ಆ ದೇಶಗಳ ಮಟ್ಟಕ್ಕೇರಲು ಸಾಧ್ಯ– **ಸಿ. ಜಯಂತಿ, ನವದೆಹಲಿ.**

* ಮಹಿಳೆಯರ ಸಬಲೀಕರಣ ಕಾರ್ಯ ವಿಳಂಬವಾಗುತ್ತ ಹೋದಷ್ಟು ಸಮಸ್ಯೆ ಇನ್ನಷ್ಟು ಗಂಭೀರವಾಗುತ್ತಾ ಹೋಗುತ್ತದೆ. ತಲೆಮಾರಿನುದ್ದಕ್ಕೂ ಬೆಳೆಯುತ್ತ ಸಾಗುತ್ತದೆ. ಇದರಿಂದ ಸಮಾಜ ಬೆಳವಣಿಗೆಯು ಕುಂಠಿತಗೊಳ್ಳುತ್ತದೆ. ಇಂತಹ ನಷ್ಟವನ್ನು ಭರಿಸುವುದು ದೇಶಕ್ಕೆ ಸಾಧ್ಯವಿಲ್ಲ– **ಹರ್ಜಿತ್ ಅಹ್ಲುವಾಲಿ.**

* ಸಮಾನತೆಯ ಹೊಸ ಪರಿಸರವೊಂದನ್ನು ಸೃಷ್ಟಿಸುವುದು ಒಂದು ಪ್ರಮುಖ ಸವಾಲಾಗಿದೆ. ಹಾಗೂ ಇದಕ್ಕೆ ನಾಯಕತ್ವ ರಾಷ್ಟ್ರೀಯ ನಾಯಕರಿಂದ, ಅವರ ಮತ ಧರ್ಮ ಯಾವುದೇ ಇರಲಿ ದೊರೆಯಬೇಕು. ಇದು ಸಾಧ್ಯವಾಗಲು ಶಿಕ್ಷಣ, ಆರ್ಥಿಕ ಅವಕಾಶಗಳು, ಸಾಮಾಜಿಕ ಪುರಸ್ಕಾರ, ಸಮನಾಗಿ ದೊರೆಯಬೇಕು. ಆರೋಗ್ಯ ಕ್ಷೇತ್ರಗಳಲ್ಲಿ ಸೂಕ್ತ ಕಾರ್ಯಾಚರಣೆ ನಡೆಯಬೇಕು– **ಪ್ರೊ. ಕುಸುಮ್.**

ಭಾರತದಲ್ಲಿ ಮಹಿಳೆಯರಿಗಾಗಿಯೇ ರೂಪಿಸಲಾದ ಕಾರ್ಯ ಯೋಜನೆಗಳು ಆರೋಗ್ಯ, ಶಿಕ್ಷಣ, ಉದ್ಯೋಗ ಮತ್ತು ರಾಜಕೀಯ ಹಾಗೂ ಆರ್ಥಿಕ ಸಶಕ್ತತಾ ಕಾರ್ಯ ಚಟುವಟಿಕೆಗಳು ಉತ್ತಮ ಫಲಿತಾಂಶಗಳನ್ನು ನೀಡುತ್ತಿವೆ– **ಶ್ರೀಮತಿ ಜಿ. ಭಾಗ್ಯಲಕ್ಷ್ಮಿ.**

* ಪ್ರಕೃತಿಯ ನಿಯಮಾನುಸಾರ ಜನಸಂಖ್ಯೆಯ ಅರ್ಧದಷ್ಟಿರಬೇಕಾದ ಮಹಿಳೆಯರ ಸಂಖ್ಯೆ ದಿನೇ ದಿನೇ ಕಡಿಮೆಯಾಗುತ್ತಿರುವುದಕ್ಕೆ ಜಗತ್ತಿನಾದ್ಯಂತ ಮಹಿಳೆ ಯರನ್ನು ಅಲಕ್ಷಿಸುತ್ತಿರುವ ಲಿಂಗ ತಾರತಮ್ಯವೆಸಗುತ್ತಿರುವ ಎಲ್ಲ ನಡುವಳಿಗಳೇ ಕಾರಣ. ಇದರ ಪರಿಣಾಮವಾಗಿ ಲಿಂಗ ಅನುಪಾತದಲ್ಲಿ ಆತಂಕಕಾರಿ ಅಂಕಿ–ಅಂಶಗಳನ್ನು ನಾವು ಕಾಣುತ್ತಿದ್ದೇವೆ. ದೇಶದ ಲಿಂಗಾನುಪಾತ ೯೩೩ ಇದ್ದರೆ ೦–೬ ವರ್ಷಗೊಳಗಿನ ಈ ಪ್ರಮಾಣ ೯೨೭ ಇರುವುದು, ಹೆಣ್ಣು ಶಿಶುಗಳ ಸಂಖ್ಯೆ ಕಡಿಮೆಯಾಗುತ್ತಿರುವ ಸಂಕೇತ. ರಾಜ್ಯದಲ್ಲಿ ಈ ಸಂಖ್ಯೆ 965 ಇದ್ದು ಸ್ವಲ್ಪ ಸುಧಾರಿಸಿದೆ ಎನಿಸಿದರೂ ನೆಮ್ಮದಿ ಪಡುವಂತದ್ದಲ್ಲ. ದೇಶದ ಮುಂದುವರಿದ ರಾಜ್ಯಗಳಾದ ಪಂಜಾಬ್–876, ಹರಿಯಾಣ–861, ಪ್ರಮಾಣ ಗಮನಿಸಿದರೆ ಮಹಿಳೆಯರಿಗೆ ನಮ್ಮಲ್ಲಿರುವ ನೈಜ ಸ್ಥಾನಮಾನದ ಅರಿವಾಗುತ್ತದೆ **– ಒಂದು ವರದಿ.**





* ಸಮಸ್ಯೆರಹಿತ ಕುಟುಂಬಗಳಿಲ್ಲದಿಲ್ಲ. ಪರಿಣಾಮಕಾರಿ ಪ್ರಯತ್ನದಿಂದ ಗುರಿ ತಲುಪುವುದು ಸುಲಭವೆನಿಸುತ್ತದೆ. ಮಾಹಿತಿ ತಂತ್ರಜ್ಞಾನ ಹಾಗೂ ಜೀವಾಣು ತಂತ್ರಜ್ಞಾನಗಳಲ್ಲಿ ಮಹಿಳೆಯರಿಗೆ ತಿಳುವಳಿಕೆ ನೀಡುವುದರಿಂದ ಪುರುಷರಿಗೆ ಸರಿಸಮಾನವಾದ ಸ್ತ್ರೀ ಜಗತ್ತನ್ನು ಬೆಳೆಸಬಹುದು – **ಶ್ರೀಮತಿ ಲೀನಾ ಮಹೆಂದಲ್.**

* ಮಹಿಳೆಯರು ಎದುರಿಸಬೇಕಾದ ಸಮಸ್ಯೆಗಳು ಸಂಕೀರ್ಣ ಸ್ವರೂಪದ್ದು, ಸಾಮಾಜಿಕ ದಬ್ಬಾಳಿಕೆಗಳು ಜೊತೆಗೆ ಮಹಿಳೆಯರನ್ನೇ ಅಂಗರ್ಗತವಾಗಿರುವ ಮಾನಸಿಕ ಕೀಳರಿಮೆ ಯಿಂದ ಅವರನ್ನು ಪಾರು ಮಾಡಲು ಬಹುಮುಖಿ ಪ್ರಯತ್ನಗಳು ನಡೆಯಬೇಕು. ಅವರ ಕೈಕಾಲು ಕಟ್ಟಿ ಹಾಕಿ, ನೀನು ಸ್ವತಂತ್ರಳು, ನಿನಗೆ ಎಲ್ಲವೂ ಇದೆ ಎನ್ನುವ ಬಾಯಿ ಪಚಾರ ನಿಲ್ಲಿಸಬೇಕು **–ಶ್ರೀಮತಿ ನಾಗಮಣಿ ಎಸ್. ರಾವ್.**

* ಹೆಣ್ಣಿಗೆ ತಾನೂ ಒಬ್ಬ ವ್ಯಕ್ತಿ, ತನಗೂ ಚಿಂತಿಸುವ, ತೀರ್ಮಾನ ತೆಗೆದುಕೊಳ್ಳುವ ಶಕ್ತಿ ಇದೆ. ತನ್ನಿಂದಲೂ ಸಮಾಜಕ್ಕೆ ಉಪಯೋಗ ಆಗುತ್ತದೆ ಎಂಬ ಆತ್ಮವಿಶ್ವಾಸ ಬರಲು ಸ್ವಾವಲಂಬಿ ಆಗುವುದು ಅಗತ್ಯ, ಗಂಡ, ಮನೆ, ಮಕ್ಕಳಿಂದಾಚೆಯೂ ಒಂದು ವಿಶಾಲ ಪ್ರಪಂಚವಿದೆ ಎಂದು ಅರಿಯುವ ಅವಕಾಶ ಪಡೆದುಕೊಳ್ಳುವುದು ಮುಖ್ಯ. ಮನಸ್ಸು ಮಾಡಿದರೆ, ಹೆಣ್ಣು ಏನನ್ನೂ ಸಾಧಿಸಬಲ್ಲಳು, ಅವಕಾಶ ಸಿಗಬೇಕಷ್ಟೇ– **ಶ್ರೀಮತಿ ವಸಂತ ಕಲ್‌ಬಾಗಲ್.**

ಮಹಿಳಾ ಸಬಲೀಕರಣಕ್ಕೆ ಒತ್ತು ಕೊಡುವುದರ ಜೊತೆಗೆ ಮಹಿಳೆಯರ ಯೋಗಕ್ಷೇಮ ಕಾರ್ಯಕ್ರಮಗಳನ್ನು ಸರ್ಕಾರವು ಜಾರಿಗೆ ತಂದಿದೆ. ಭ್ರೂಣ ಹತ್ಯೆಯನ್ನು ತಡೆಯಲು ಕಟ್ಟುನಿಟ್ಟಿನ ಕಾನೂನು ಅನುಷ್ಠಾನದಲ್ಲಿದೆ. ಹೀಗಿದ್ದೂ ಮಹಿಳೆಯರ ಸಂಖ್ಯೆ ಕ್ಷೀಣಿಸುತ್ತಲಿದೆ. ಮಹಿಳೆಯರ ಸಂಖ್ಯೆಯಲ್ಲಿ ಇದೇ ರೀತಿ ಮುಂದುವರೆದರೆ ಸಾಮಾಜಿಕ ನೈತಿಕ ಧಾರ್ಮಿಕ ಕ್ಷೇತ್ರದಲ್ಲಿ ಅನೇಕ ತಲ್ಲಣಗಳು ಕಾಣಿಸಿ ಕೊಳ್ಳದಿರಲಾರವು. ಮಹಿಳೆಯರು ಸಬಲ ರಾಗುವುದಕ್ಕೆ ಕೊಡುವ ಮಹತ್ವ ಸಂಖ್ಯಾಬಲದಲ್ಲಿ ಸಮತೋಲನ ಕಾಯ್ದುಕೊಳ್ಳುವುದಕ್ಕೆ ಆದ್ಯತೆ ಕೊಡಬೇಕಿದೆ.

**ಲಿಂಗಾನುಪಾತ ಜನಗಣತಿ ವರ್ಷವಾರು :**

| ಜನಗಣತಿ ವರ್ಷ | 1000 ಪುರುಷರ ಸಂಖ್ಯೆಗೆ ಮಹಿಳೆಯರ ಸಂಖ್ಯೆ |
|---|---|
| 1901 | 972 |
| 1911 | 964 |
| 1921 | 955 |
| 1931 | 950 |
| 1941 | 945 |
| 1951 | 972 |
| 1961 | 941 |
| 1971 | 930 |
| 1981 | 934 |
| 1991 | 927 |
| 2001 | 933 |

ಲಿಂಗಾನುಪಾತದಲ್ಲಿ ಹೆಚ್ಚಳ ಬರುವ ನಿಟ್ಟಿನಲ್ಲಿ ಮಹಿಳೆ ಯರಲ್ಲಿ ಜಾಗೃತಿ ತರಬೇಕಿದೆ. ಅದರಂತೆ 'ಹೆಣ್ಣುಮಗು' ಕುಟುಂಬದ ಶ್ರೇಯಸ್ಸಿಗೆ ಅಗತ್ಯವೆಂಬ ಅರಿವು ಸಮಾಜದಲ್ಲಿ ಜಾಗೃತವಾಗಬೇಕಿದೆ. ಧಾರ್ಮಿಕ ಮುಖಂಡರು ಗಂಡು ಮಗುವಿನಿಂದ ನಿರ್ವಹಿಸುವ ಧಾರ್ಮಿಕ ವಿಧಿ–ವಿಧಾನ ಗಳು ಹೆಣ್ಣು ಮಗುವಿನಿಂದ ಮಾಡಿಸಿದರೂ ಫಲಪ್ರಾಪ್ತಿ ದೊರೆಯುವುದೆಂಬುದಕ್ಕೆ ಒತ್ತು ನೀಡಬೇಕಿದೆ.

ಹೆಣ್ಣು ಮಗು ಮಾನವ ಕುಲಕೋಟಿ ಉಳಿಕೆಗೆ ಅಗತ್ಯ ವೆಂಬ ಅರಿವು ಮೂಡಿಸುವ ಕಾರ್ಯಸೂಚಿ ಹಾಕಿಕೊಳ್ಳ ಬೇಕಿದೆ. ಮಹಿಳೆಯರ ಸಂಖ್ಯೆ ನಿರಂತರ ಇಳಿಕೆಯಾಗುತ್ತ ಹೋದರೆ ಸಮಾಜದಲ್ಲಿ ಸಾಮರಸ್ಯವಾಗಲಿ, ಸಮ ತೋಲನದ ಅಭಿವೃದ್ಧಿಯಾಗಲಿ ಸಾಧ್ಯವಾಗದು. ಅಭಿವೃದ್ಧಿಯ ಗುರಿಯಲ್ಲಿ ಲಿಂಗ ಸಮಾನತೆಯೂ ಒಂದಾಗಿದೆ. ಮಹಿಳಾ ಸಂಖ್ಯೆಯಲ್ಲಿ ಇಳಿಕೆಯನ್ನು ತಡೆ ಗಟ್ಟುವುದರ ಅನಿವಾರ್ಯ ಗುರಿಯಾಗಬೇಕಾಗಿದೆ.

ಮಹಿಳೆಯರ ಸಂಖ್ಯೆ ಕ್ಷೀಣಿಸುವುದು ಒಂದು ಸಾಮಾಜಿಕ ವೈಫಲ್ಯವನ್ನು ಸೂಚಿಸುತ್ತದೆ. ಮಹಿಳೆಯರ ಆಯುಷ್ಯದ ವೃದ್ಧಿಯು ಇನ್ನೊಂದು ಸಾಮಾಜಿಕ ಸಮಸ್ಯೆಗೆ ದಾರಿ ಮಾಡುತ್ತದೆ. ಗಂಡನಿಲ್ಲದ ಹೆಂಡತಿಯ ಬಾಳು

ಅತ್ಯಂತ ಕಠಿಣ ಸಮಸ್ಯೆಗಳಿಗೆ ನಾಂದಿ ಹಾಡುತ್ತದೆ. ಆರ್ಥಿಕ ಸಬಲತೆಯನ್ನು ಹೊಂದದ ಕುಟುಂಬದ ಮಹಿಳೆಯ ಬದುಕು ಚಿಂತಾಜನಿಕವೆಂದು ಹೇಳಬಹುದು. ಆಯುಷ್ಯ ವೃದ್ಧಿಯಲ್ಲಿ ಮಹಿಳೆ ಮುಂದಿದ್ದಾಳೆ. ಲಿಂಗಾನುಪಾತದಲ್ಲಿ ಹಿಂಜರಿತ ಕಂಡಿರುವ ಮಹಿಳೆಯರು ಆಯುಷ್ಯಮಾನದ ಅವಲೋಕನವು ಈ ಕೆಳಗಿನಂತಿದೆ.

| ಅವಧಿ | ಗಂಡಿನ ಆಯುಷ್ಯ ವರ್ಷಗಳಲ್ಲಿ | ಹೆಣ್ಣಿನ ಆಯುಷ್ಯ ವರ್ಷಗಳಲ್ಲಿ | ಒಟ್ಟಾರೆ ವರ್ಷಗಳಲ್ಲಿ |
|---|---|---|---|
| 1951 | 32.7 | 36.2 | 36.7 |
| 1981 | 54.1 | 54.7 | 54.4 |
| 1991–95 | 59.7 | 60.9 | 60.3 |
| 2001–05 | 62.3 | 63.9 | 63.2 |
| 2011–16 | 62.2 | 70.8 | 66.5 |

ಭಾರತದಲ್ಲಿ ಗಂಡು ಹೆಣ್ಣಿನ ಜೀವನ ಕ್ರಮವನ್ನು ಆಳವಾಗಿ ಅಭ್ಯಸಿಸಿದರೆ ಹೆಣ್ಣುಮಕ್ಕಳು ವ್ಯಸನಿಕರಲ್ಲ. ಆಹಾರ ಭದ್ರತೆಯ ವಿಷಮ ಪರಿಸ್ಥಿತಿಯಲ್ಲೂ ಒಳ್ಳೆಯ 'ಆಹಾರ ಪದ್ಧತಿ' ಬೆಳೆಸಿಕೊಂಡವರಾಗಿದ್ದಾರೆ. ಇದಲ್ಲದೆ ಅವರು ಆಚಾರ-ವಿಚಾರದಲ್ಲಿ ಗಟ್ಟಿತನ ಹೊಂದಿದ್ದಾರೆ ಮತ್ತು ವಿಷಮ ಪರಿಸ್ಥಿತಿಗಳನ್ನು ನಿಭಾಯಿಸುವಲ್ಲಿ ಚತುರರಾಗಿದ್ದಾರೆ. ಹೆಂಡತಿ ಸತ್ತ ನಂತರ ಗಂಡ ಬಹಳ ದಿನ ಬದುಕಲಾರ ಎಂಬ ಅಭಿಪ್ರಾಯ ಇದನ್ನೇ ಹೇಳುತ್ತದೆ. ಮಹಿಳೆಯರು ಆಯುಷ್ಯ ಗಳಿಸುವಲ್ಲಿ ಮುಂಚೂಣಿಯಲ್ಲಿದ್ದಾರೆ. ಈ ಮುಂಚೂಣಿಯೊಂದಿಗೆ ಸಮಾನತೆ ಮತ್ತು ವಿಶಾಲ ಮನೋಭಾವ ಗಳಿಸಿಕೊಂಡರೆ ಮಹಿಳೆ ಸದೃಢ ಸಮಾಜದ ಕೇಂದ್ರ ಬಿಂದುವಾಗುವಲ್ಲಿ ಸಂಶಯವಿಲ್ಲ.

ಮಹಿಳೆಯರ ಆಯುಷ್ಯವೃದ್ಧಿಯು ಮಹಿಳೆಯರ ವಿಶೇಷ ಕಾರ್ಯಯೋಜನೆ ಹಾಕಿಕೊಳ್ಳಲು ಸೂಚಿಸುತ್ತದೆ., ಅವರ ಸಂಧ್ಯಾ ಜೀವನ ನಿರೀಕ್ಷಿತ ಅನುಕೂಲತೆಗಳನ್ನು ಹೊಂದುವಂತೆ ನೋಡಿಕೊಳ್ಳುವುದು ಅಷ್ಟೇ ಮುಖ್ಯವಾಗಿದೆ. ಅರ್ಥ ಶಾಸ್ತ್ರಜ್ಞ ಕೇನ್ಸ ಅವರ ಅಭಿಪ್ರಾಯ ಇಲ್ಲಿ ಉಲ್ಲೇಖ ನೀಯ ನಾವು ದೀರ್ಘಾವಧಿಯ ಪರಿಣಾಮಗಳ ಬಗೆಗೆ ಹೆಚ್ಚು ಚಿಂತಿತರಾಗಿಲ್ಲ. ಯಾಕೆಂದರೆ ದೀರ್ಘಾವಧಿಯಲ್ಲಿ ನಾವಿರುವುದಿಲ್ಲ. ನಾವು ಬದುಕುವುದು ಅಲ್ಪಾವದಿಯಲ್ಲಿ. ಹಾಗಾಗಿ ನಾವು ಅಲ್ಪಾವಧಿಯ ಬಗ್ಗೆ ಮಾತ್ರ ಚಿಂತಿತರಾಗಿದ್ದೇವೆ. ಈ ವಿಚಾರದಲ್ಲಿ ದೀರ್ಘಾಯುಷ್ಯಕ್ಕಿಂತ ಇದ್ದಷ್ಟು ದಿನಮಾನದಲ್ಲಿ ಚೆನ್ನಾಗಿ ಬದುಕಬೇಕು ಮತ್ತು ಬದುಕಲು ಪರಿಪೂರ್ಣ ಅವಕಾಶಗಳಿರಬೇಕೆಂದು ಎದ್ದು ಕಾಣುತ್ತದೆ. ಮಹಿಳೆಯರ ಆಯುಷ್ಯ ವೃದ್ಧಿಯ ಒಂದು ಉತ್ತಮ ಅಭಿವೃದ್ಧಿಯ ಒಂದು ಉತ್ತಮ ಬೆಳವಣಿಗೆ ಎಂಬುದು ಮೆಚ್ಚತ್ತಕ್ಕ ಸಂಗತಿಯೇ ಸರಿ. ಆದರೆ ಆ ಆಯುಷ್ಯ ಯಾತನೆಗೆ, ಶೋಷಣೆಗೆ ಅವಕಾಶವಾಗದಂತೆ ಎಚ್ಚರಿಕೆ ಹೊಂದುವುದು ಇನ್ನಷ್ಟು ಮುಖ್ಯವಾಗಿದೆ.

ಮಹಿಳೆಯರ ಬದುಕಿನ ಉತ್ತಮಗೊಳ್ಳುವಿಕೆ ಕೇವಲ ಆಯುಷ್ಯ ವೃದ್ಧಿಯಿಂದ ಅಳತೆಯಲಿಕ್ಕಾಗದು. ಅವಳು ಹೇಗೆ ಬದುಕುತ್ತಿದ್ದಾಳೆ? ಅವಳಿಗೆ ಸಿಗುತ್ತಿರುವ ಸ್ಥಾನಮಾನಗಳೇನು? ಶಿಕ್ಷಣ, ಆಹಾರ ವಿಹಾರದೊಳಗೆ ಸರಿಸಮಾನತೆ ಸಿಗುತ್ತಿರುವುದೇನು? ಕುಟುಂಬದ ಆಗು ಹೋಗುಗಳನ್ನು ನಿಭಾಯಿಸುವಲ್ಲಿ ಅವಳ ಅಭಿಪ್ರಾಯ ಪಡೆಯಲಾಗುತ್ತಿರುವುದೇನು? ಅವಳ ಕೆಲಸ ಕಾರ್ಯಗಳನ್ನು ಪರಿಗಣಿಸಲಾಗುತ್ತಿದೆಯೇ? ಉದ್ಯೋಗದಲ್ಲಿ ಸಮಾನತೆ ಸಮಾನ ಕೂಲಿ ಕೊಡಲಾಗುತ್ತಿದೆಯೇ? ಎಂಬೆಲ್ಲ ಸಂಗತಿಗಳಿಗೆ ಸೂಕ್ತ ಪರಿಹಾರ ಸಿಗಬೇಕಾಗಿದೆ. ಆಸ್ತಿ ಮತ್ತು ಭೂ ಒಡೆತನದಲ್ಲಿ ಮಹಿಳೆಗೆ ಇನ್ನು ಸಮಾನ ಹಕ್ಕು ಸಿಗದಂತಿದೆ. ಮಹಿಳಾ ಉದ್ಯಮಶೀಲತೆಗೆ ಪ್ರೋತ್ಸಾಹ ಸಿಗುತ್ತಿಲ್ಲ. ಜಾಗತೀಕರಣದ ಹಿನ್ನಲೆಯಲ್ಲಿ ಮಹಿಳೆಯರು ತಯಾರಿಸುತ್ತಿರುವ ವಸ್ತು ಒಡವೆಗಳಿಗೆ ಬೇಡಿಕೆ ಕಡಿಮೆಯಾಗಿದೆ. ಇದಲ್ಲದೆ ಕರಕುಶಲ ಉದ್ಯೋಗಗಳು ಕ್ಷೀಣಿಸುತ್ತಲಿವೆ. ಬಡತನಕ್ಕೂ ಮಹಿಳೆಗೂ ಬಲವಾದ ನಂಟಿವೆ. ಈ ದಿಸೆಯಲ್ಲಿ ಆಯುಷ್ಯ ವೃದ್ಧಿ ತನ್ನ ಮೌಲ್ಯ ಕಳೆದುಕೊಳ್ಳುವುದಿಲ್ಲವೇ ?

ಮಹಿಳೆಯರ ಆಯುಷ್ಯ ವೃದ್ಧಿಯು ಅವರ ನೈಜ ಅಭಿವೃದ್ಧಿಯತ್ತಲೂ ಗಮನ ಹರಿಸಬೇಕಿದೆ. ಮಹಿಳೆಯರ ಬದುಕು ಕ್ಷೇಮಕರವಾಗಬೇಕಾದರೆ ಶಿಕ್ಷಣ ಮತ್ತು ಉದ್ಯೋಗದಲ್ಲಿ ಉತ್ತಮ ಸಾಧನೆ ಮಾಡಬೇಕಾಗಿರುವುದು ಅಗತ್ಯ. ಮಹಿಳೆಯ ಆಯುಷ್ಯ ವೃದ್ಧಿಯು ನಮ್ಮ ಸಾಮಾಜಿಕ, ರಾಜಕೀಯ ಮತ್ತು ಸಾಂಸ್ಕೃತಿಕ ಜವಾಬ್ದಾರಿಯನ್ನು ಹೆಚ್ಚಿಸಿದೆ. ಈ ಜವಾಬ್ದಾರಿಯನ್ನು ನಿಭಾಯಿಸುವುದೇ ಉತ್ತಮ ಮಾದರಿಯ ಸಮಾಜವಾಗಿದೆ.

*





## ಶ್ರೀ ಸಿದ್ಧಗಂಗಾಮಠದಿಂದ ಪ್ರವಾಹ ಸಂತ್ರಸ್ತರಿಗೆ ವಸತಿ ದಾಸೋಹ

ಕರ್ನಾಟಕ ಕಂಡರಿಯದ, ಕೇಳರಿಯದ ಪ್ರವಾಹ. ಕಳೆದ ೨೦೦೯ರ ಅಕ್ಟೋಬರ್ ಮತ್ತು ನವೆಂಬರ್‌ನಲ್ಲಿ ರಾಜ್ಯದ ಉತ್ತರ ಕರ್ನಾಟಕದ ೧೪ ಜಿಲ್ಲೆಗಳು ತತ್ತರಿಸಿ ಹೋದವು. ಮನೆ ಮಠದನಕರುಗಳನ್ನು ಕಳೆದುಕೊಂಡು ಬೀದಿಗೆ ಬಿದ್ದವು. ಕೊಟ್ಟ ಕೈಗಳು ಕೈಚಾಚುವ ಸ್ಥಿತಿಗೆ ಬಂದವು. ಉಟ್ಟಬಟ್ಟೆ ಬಿಟ್ಟರೆ ಮತ್ತೇನೂ ಉಳಿಯಲಿಲ್ಲ. ಆಶ್ರಯಕ್ಕೆ ಬಯಲೇ ಗತಿಯಾಯಿತು ತುತ್ತು ಅನ್ನಕ್ಕೆ ಹತ್ತು ದಿಕ್ಕಿಗೆ ಕಣ್ಣಾಡಿಸಿದ ಸ್ಥಿತಿ. ಶೂನ್ಯವೇ ಎದುರಾಯಿತು. ಇದನ್ನು ಕಂಡ, ಕೇಳಿದ ಸರ್ಕಾರ, ಸಂಘ ಸಂಸ್ಥೆಗಳು, ಉದಾರ ಮನಸ್ಕರು, ಸಾರ್ವಜನಿಕರು ಹಿಂದು ಮುಂದು ನೋಡದೆ ಧನ-ಧಾನ್ಯ-ವಸ್ತುಗಳನ್ನು ನೀಡಿದರು. ಮನೆಗಳನ್ನು ಕಟ್ಟಿಕೊಡಲು ಸರ್ಕಾರ ಮುಂದಾಯಿತು. ಮಠಗಳು ಮುಂದೆ ಬಂದವು. ಸೇವಾಸಂಸ್ಥೆಗಳು ಎದ್ದು ನಿಂತವು. ಮಾನವೀಯತೆ ಬತ್ತಿ ಹೋಗಿಲ್ಲ ಎಂಬುದನ್ನು ಎತ್ತಿ ಹಿಡಿದವು.

ಶ್ರೀ ಸಿದ್ಧಗಂಗಾಮಠ ತ್ರಿವಿಧ ದಾಸೋಹ ಕ್ಷೇತ್ರ, ಅನ್ನ, ಜ್ಞಾನ, ಅಭಯಗಳ ಅವಿಮುಕ್ತ ಕ್ಷೇತ್ರ, ಕರ್ನಾಟಕದ ಎಲ್ಲ ಜಿಲ್ಲೆಗಳ ಎಲ್ಲ ಜಾತಿ, ಕೋಮು, ಕುಲ, ಪಂಗಡಗಳ ಮಕ್ಕಳಿಗೆ ಆಶ್ರಯವಿತ್ತಿರುವ ಮಠ. ಒಂಭತ್ತು ಸಾವಿರಕ್ಕೂ ಹೆಚ್ಚು ಮಕ್ಕಳಿಗೆ ನೆರಳು ನೀಡಿರುವ ಸೇವಾಧಾಮ. ಪರಮಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರ ಕಾಯಕ- ದಾಸೋಹ ಕೈಂಕರ್ಯಗಳಿಂದ ಮನೆ ಮಾತಾಗಿರುವ ಪುಣ್ಯಕ್ಷೇತ್ರ.

ರಾಯಚೂರು ಜಿಲ್ಲೆ ಮಾನ್ವಿ ತಾಲ್ಲೂಕು, ಉಮಲಿಪನ್ನೂರು ಗ್ರಾಮಗಳು ನೆರೆಹಾವಳಿಯಿಂದ ನೆಲಕಚ್ಚಿದುದನ್ನು ಕಣ್ಣಾರೆ ಕಂಡು ಸಂತ್ರಸ್ತರಿಗೆ ಮನೆಕಟ್ಟಿಕೊಡಲು ಸಿದ್ಧಗಂಗಾಮಠ ಮುಂದೆ ಬಂದಿದೆ. ಪರಮಪೂಜ್ಯ ಶ್ರೀ ಶ್ರೀಗಳವರ ಆದೇಶದ ಮೇರೆಗೆ ನಿವೃತ್ತ ಚೀಫ್ ಇಂಜಿನಿಯರ್ ಆದ ಶ್ರೀ ಬಿ.ಎಸ್. ಚನ್ನಪ್ಪನವರ ನೇತೃತ್ವದಲ್ಲಿ ಇನ್ನೂರು ಮನೆಗಳ ನಿರ್ಮಾಣ ಕಾರ್ಯವನ್ನು ನಡೆಸಿದ್ದಾರೆ. ಸುಸಜ್ಜಿತವಾದ ಒಂದು ಮನೆಯ-ನಡುಮನೆ, ಮಲಗುವ ಕೋಣೆ, ಅಡಿಗೆಮನೆ, ಸ್ನಾನದ ಮನೆ, ಶೌಚ ಗೃಹಗಳನ್ನೊಳಗೊಂಡಂತೆ ಮನೆಯೊಂದಕ್ಕೆ ೧.೫ ಲಕ್ಷ ರೂಗಳು ಬೇಕಾಗುತ್ತದೆ. ೨೦೦ ಮನೆಗಳಿಗೆ ಮುನ್ನೂರು ಲಕ್ಷ ರೂಗಳು ಬೇಕಾಗುತ್ತದೆ. ಈಗಾಗಲೇ ೧೩೦ ಮನೆಗಳು ನಿರ್ಮಾಣ ಕೊನೆಯ ಹಂತದಲ್ಲಿದೆ. ೨೦೧೦ರ ಆಗಸ್ಟ್ ೩೧ರೊಳಗೆ ೨೦೦ ಮನೆಗಳನ್ನು ನಿರ್ಮಾಣ ಮಾಡಬೇಕಾ ಗಿದೆ. ರಾಯಚೂರು ಜಿಲ್ಲೆಯ ಜಿಲ್ಲಾಧಿಕಾರಿಗಳು ಸಹಕಾರ ನೀಡುತ್ತಿದ್ದಾರೆ.

ಈ ಸಂದರ್ಭದಲ್ಲಿ ಪರಮಪೂಜ್ಯ ಶ್ರೀ ಶ್ರೀಗಳವರು ಮಹದಾಶಯ ತುಂಬಿ ಬರುವಂತೆ ಶ್ರೀಮಠದ ಭಕ್ತಾಧಿಗಳು, ಅಭಿಮಾನಿಗಳು, ಹಿತೈಷಿಗಳು, ಹಳೆಯ ವಿದ್ಯಾರ್ಥಿಗಳು, ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಯ ಆಶ್ರಯದಲ್ಲಿ ಸೇವೆ ಸಲ್ಲಿಸುತ್ತಿರುವ ವಿವಿಧವರ್ಗದ ಶಿಕ್ಷಕರು, ನೌಕರರು, ಉದಾರವಾಗಿ ಶಕ್ತ್ಯಾನುಸಾರ ಆರ್ಥಿಕ ಸಹಾಯವನ್ನು ಮಾಡುವುದರ ಮೂಲಕ ಶ್ರೀ ಶ್ರೀಗಳವರ ಗೃಹನಿರ್ಮಾಣ ದಾಸೋಹದಲ್ಲಿ ಭಾಗಿಗಳಾಗಬೇಕೆಂದು ಪ್ರಾರ್ಥಿಸಲಾಗಿದೆ.

### ಸೋಮೇಶ್ವರ ಶತಕ

*ಹುಲುಬೇಡಂ ಮುರವೈರಿಯಂ ಕುರುಬನಾ*
*ಶೂದ್ರೀಕನಂ ರಾಮನಂ ।*
*ಬೆಲೆವೆಣ್ಣಿಂದ ಶಿಖಂಡಿ ಭೀಷ್ಮನುಮನಾ*
*ದ್ರೋಣಾರ್ಯನಂ ವಸ್ತ್ರವಂ ॥*
*ತೊಳೆವಾತಂ ಹತಮಾಡರೇ ಪಣೆಯೊಳಂ*
*ಪೂರ್ವಾರ್ಜಿತಂ ಹಾಗಿರಲ್ ।*
*ಕೊಲನೇ ಕ್ಷುದ್ರ ಸಮರ್ಥನಂ*
*ಹರಹರಾ ಶ್ರೀ ಚೆನ್ನಸೋಮೇಶ್ವರಾ ॥*

ಅಲ್ಪನಾದ ಬೇಡರವನೊಬ್ಬನು ಶ್ರೀಕೃಷ್ಣನನ್ನೂ, ಕುರುಬನೊಬ್ಬನು ಶೂದ್ರೀಕನೆಂಬ ವೀರನನ್ನೂ, ಅಂಬೆಯೆಂಬ ಹೆಂಗಸು ಪರುಶುರಾಮನನ್ನೂ, ಶಿಖಂಡಿಯೆಂಬವನು ಭೀಷ್ಮಾಚಾರ್ಯನನ್ನೂ, ದ್ರೋಣಾಚಾರ್ಯನನ್ನೂ ನಾಶ ಮಾಡುವುದಕ್ಕೆ ಕಾರಣರಾಗಲಿಲ್ಲವೆ? ಹಣೆಯ ಬರಹವು ಹಾಗಿದ್ದರೆ ಸಮರ್ಥನನ್ನು ಅಲ್ಪನಾದವನು ಕೂಡ ಕೊಲ್ಲಲಾಗುವುದು.

## ಗಣಿ – ಭಕ್ತಿಯ ರತ್ನಗಣಿ ಬಳ್ಳಾರಿ

ಶಿರಡಿ ಸಾಯಿಬಾಬನ ಬೃಹತ್ ದೇವಾಲಯ. ನಾಲ್ಕೂ ದಿಕ್ಕಿನಲ್ಲಿ ಬಾಗಿಲುಗಳು. ಐದಡಿ ನಾಲ್ಕು ಅಂಗುಲ ಎತ್ತರದ ಸುಂದರ ಸಾಯಿಬಾಬ ಶಿಲಾವಿಗ್ರಹ. ಅದೂ ಅಮೃತಶಿಲೆಯಲ್ಲಿ ಅರಳಿದ ದೇವಮೂರ್ತಿ. ಪ್ರಾರಂಭೋತ್ಸವಕ್ಕೆ ಹರಿದು ಬಂದ ಜನಸಾಗರ. ಭಕ್ತಿಯ ಅಲೆಗಳ ಲೀಲಾದೃಶ್ಯ. ಹೋಮ ಹವನಗಳ ಧೂಪಧೂಮದ ನರ್ತನ. ಸಾಲುಗಟ್ಟಿ ಬರುತ್ತಿತ್ತು ಭಕ್ತಕೋಟಿ. ಸ್ವಯಂ ಸೇವಕರ ಮಾರ್ಗದರ್ಶನ. ಪೋಲಿಸರ ಶಿಸ್ತು ರಕ್ಷಣೆ ಸಹಕಾರ. ಮಂಗಳ ವಾದ್ಯಗಳ ಸುಮಧುರ ಲೋಕ. ಅಲಂಕಾರ ವೈಭವ. ದಾಸೋಹದ ವ್ಯವಸ್ಥೆ ನೂರು ನೂರು ಕಡೆ. ಭಕ್ತಾದಿಗಳಿಂದ ಭಕ್ತಿಗೀತೆಗಳು. ಪ್ರಸಾದ ವಿತರಣೆ ಹತ್ತೆಂಟು ಕಡೆ. ನಗರದ ತುಂಬಾ ಪ್ರಚಾರ ಫಲಕಗಳು. ಬೀದಿ ಬೀದಿಗಳಲ್ಲಿ ಫ್ಲೆಕ್ಸ್‌ಗಳು. ದಿನಾಂಕ 17-06-2010ರಂದು ಅಭೂತಪೂರ್ವ ಉದ್ಘಾಟನೆ. ಸಚಿವರು, ಶಾಸಕರು, ಗಣ್ಯಮಾನ್ಯರು ಸಮಾರಂಭದಲ್ಲಿ ದಿವ್ಯಸಾನ್ನಿಧ್ಯದಲ್ಲಿ ಶ್ರೀ ಸಿದ್ಧಗಂಗಾ ಶ್ರೀಗಳು. ಶ್ರೀಗಳವರಲ್ಲಿ ಸಾಯಿಬಾಬಾ ಅವರನ್ನು ಕಂಡ ಭಾವುಕ ಭಕ್ತರು. ದರ್ಶನ ಸಿಕ್ಕರೆ ಸಾಕೆಂಬ ಹಂಬಲ. ಪಾದಮುಟ್ಟುವುದಕ್ಕಾಗಿ ನೂಕು ನುಗ್ಗಲು. ಪೋಲೀಸರದು ಅಸಹಾಯಕ ಸ್ಥಿತಿ. ಎತ್ತರದ ವೇದಿಕೆಯಲ್ಲಿ ಪರಮಪೂಜ್ಯ, ಕರ್ನಾಟಕರತ್ನ, ತ್ರಿವಿಧ ದಾಸೋಹಿ, ಬಸವಶ್ರೀ ರಾಷ್ಟ್ರೀಯ ಪ್ರಶಸ್ತಿ ಪುರಸ್ಕೃತ ಡಾ॥ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳು. ಪಕ್ಕದಲ್ಲಿಯೇ ಸಾಯಿಬಾಬಾ ದೇವ ವಿಗ್ರಹ. ಏಕಕಾಲಕ್ಕೆ ವಿಭೂತಿಪುರುಷರೀರ್ವರ ದಿವ್ಯದರ್ಶನ. 'ದೇವಮಂದಿರಪೂಜೆ ಜೀವನದಲಂಕಾರ' ವೆಂಬ ಶ್ರೀ ಶ್ರೀಗಳವರ ಆಶೀರ್ವಚನ. ಮಹಾರಾಷ್ಟ್ರದ ಅಹಮ್ಮದ್ ನಗರ ಜಿಲ್ಲೆ, ತೋಪರಗಾಂವ ತಾಲ್ಲೂಕು ಗೋದಾವರಿ ನದಿ ದಂಡೆ ಶಿರಡಿ ಪುಟ್ಟಹಳ್ಳಿಯಲ್ಲಿ ಅವತರಿಸಿದ ಸಾಯಿಬಾಬ ಅವರ ಜೀವನದ ಸಂಕ್ಷಿಪ್ತ ಪರಿಚಯ ಪ್ರೊ. ಹೆಚ್.ವಿ. ವೀರಭದ್ರಯ್ಯ ಅವರಿಂದ. ಮೆಚ್ಚುಗೆಯ ಚಪ್ಪಾಳೆ. ಶ್ರೀ ಸಿದ್ಧಗಂಗಾ ಮಠದ ಆಶ್ರಯದಲ್ಲಿ ಸೇವೆ ಸಲ್ಲಿಸುತ್ತಿರುವ ಹೈಸ್ಕೂಲ್ ಮುಖ್ಯಶಿಕ್ಷಕ ಶ್ರೀ ಬಸವರಾಜು ಅವರಿಂದ ಕಾರ್ಯಕ್ರಮದ ನಿರೂಪಣೆ. ಕನ್ನಡ ತೆಲುಗು ಭಾಷೆಗಳಲ್ಲಿ ಹರಿದು ಮುನ್ನಡೆದ ಅವಿಸ್ಮರಣೀಯ ಅಭೂತಪೂರ್ವ ಸಮಾರಂಭ.

ಸಮಾರಂಭಕ್ಕಾಗಿ ಹಗಲಿರುಳು ಶ್ರಮಿಸಿದ ಶ್ರೀ ಶಿರಡಿ ಸಾಯಿ ಸೇವಾ ಟ್ರಸ್ಟ್‌ನ ಅಧ್ಯಕ್ಷರಾದ ಶ್ರೀ ಎನ್. ಕುಮಾರಸ್ವಾಮಿ ಅವರ ಭಗೀರಥ ಭಕ್ತಿ. ಕಾರ್ಯದರ್ಶಿ ಶ್ರೀ ದತ್ತಾತ್ರೇಯ ಅವರ ಸಹಕಾರ. ಎಲ್ಲ ಸದಸ್ಯರ ಸಹ ಪ್ರಯತ್ನ. ಸಿದ್ಧಗಂಗಾ ಶ್ರೀಗಳವರಲ್ಲಿ ಬಳ್ಳಾರಿಯ ಭಕ್ತಾಧಿಗಳಿಟ್ಟುಕೊಂಡಿರುವ ಅನನ್ಯವಾದ ಗುರುಭಕ್ತಿ. ಮನೆಮನೆಗಳಲ್ಲಿ ಪರಮಪೂಜ್ಯ ಶ್ರೀ ಶ್ರೀಗಳವರ ಪಾದಪೂಜೆ. ಅದೂ ಒಬ್ಬರಿಗಿಂತ ಒಬ್ಬರು ವಿಶೇಷವಾಗಿ. ಬಳ್ಳಾರಿ ಗಣಿಗಳಿಗೆ ಮಾತ್ರ ಹೆಸರಾಗಿಲ್ಲ, ಭಕ್ತಿಯ ರತ್ನಗಣಿಯೂ ಆಗಿದೆ ಎಂಬ ಪ್ರಶಂಸೆಗೆ ಸಮಾರಂಭ ಸಾಕ್ಷಿಯಾಯಿತು. ಮಾಜಿ ಸಚಿವ ಶ್ರೀ ಅಲ್ಲಂ ವೀರಭದ್ರಪ್ಪ, ವೀರಶೈವ ಸಮಾಜದ ಅಧ್ಯಕ್ಷರಾದ ಶ್ರೀ ಇಂದು ಶೇಖರ ಸಂಗನಕಲ್, ಕರ್ನಾಟಕ ಹಾಲು ಒಕ್ಕೂಟದ ಅಧ್ಯಕ್ಷರಾದ ಶ್ರೀ ಸೋಮಶೇಖರರೆಡ್ಡಿ ಅವರ ಉಪಸ್ಥಿತಿಯಿಂದ ಸಮಾರಂಭ ಶೋಭಿಸಿತು.

ಸಿದ್ಧಗಂಗಾ ಪರಮಪೂಜ್ಯರಲ್ಲಿ ಶಿರಡಿ ಸಾಯಿಬಾಬ ಅವರನ್ನು ಕಂಡ ಭಕ್ತರ ಧನ್ಯನುಡಿಗಳು ಅನುಕರಿಣಿಸಿದುವು.

---

ಮನುಷ್ಯ ಬುದ್ಧಿ ಜೀವಿ. ಪ್ರತಿಭಾಶಾಲಿ. ಬುದ್ಧಿಶಕ್ತಿ ದೇವರು ಕೊಟ್ಟಿರುವ ಒಂದು ವರ. ಮತ್ಯಾವ ಪ್ರಾಣಿಗೂ ಈ ಶಕ್ತಿಯನ್ನು ಪರಮಾತ್ಮ ಕೊಟ್ಟಿಲ್ಲ. ಅದನ್ನು ಮನುಷ್ಯ ಉಪಯೋಗ ಮಾಡಿಕೊಳ್ಳುತ್ತಿದ್ದಾನೆ ಮತ್ತು ಬುದ್ಧಿಯನ್ನು ತೀಕ್ಷ್ಣಗೊಳಿಸಿ, ಹರಿತಗೊಳಿಸಿ, ಅದರ ಉಪಯೋಗವನ್ನು ಮಾಡಿಕೊಳ್ಳುವುದು ಗೋಚರವಾಗುತ್ತಿದೆ. ವಿಜ್ಞಾನವೆಲ್ಲವೂ ಕೂಡ ಮನುಷ್ಯನ ಬುದ್ಧಿ ಶಕ್ತಿಯಿಂದಲೇ ಆಗಿರುವುದೆಂಬ ವಿಚಾರದಲ್ಲಿ ವಾದವೇ ಇಲ್ಲ. ಏನು ಸಂಶೋಧನೆ ಮಾಡುತ್ತಿದ್ದಾರೋ, ವಿಸ್ಮಯಕಾರಿ ಸಂಶೋಧನೆಗಳು, ಎಲ್ಲಕ್ಕೂ ಮೂಲವಾಗಿರುವ ಸ್ಥಾನ ಮನುಷ್ಯನ ಮನಸ್ಸು, ಬುದ್ಧಿಯಲ್ಲಿದೆ.

–ಶ್ರೀವಾಣಿ





## ಸಾಮಾನ್ಯವಾದ ಆಹಾರ ವಸ್ತುಗಳು

–ವಾಮನರಾವ್ ಹೊದಿಕೆ*

ನಮ್ಮ ಆಹಾರದಲ್ಲಿ ವನಸ್ಪತಿಜನ್ಯ ಸಸ್ಯಾಹಾರ ಮತ್ತು ಪ್ರಾಣಿಜನ್ಯ ಆಹಾರವೆಂಬ ಮುಖ್ಯವಾಗಿ ಎರಡು ಪ್ರಕಾರಗಳಿವೆ. ಸಸ್ಯಾಹಾರಗಳು : ೧. ತೃಣಧಾನ್ಯ ಏಕದಳ ಅಖಂಡಕಾಳು– ಗೋದಿ, ಜೋಳ, ಅಕ್ಕಿ, ರಾಗಿ, ಸೆಜ್ಜೆ, ನವಣೆ, ಮುಸುಕಿನ ಜೋಳ ಮೊದಲಾದವು.

೨. ದ್ವಿದಳ ಧಾನ್ಯ: ಬೇಳೆಯ ಕಾಳು– ಹೆಸರು, ತೊಗರಿ, ಹುರಳಿ, ಕಡ್ಲೆ, ಉದ್ದು. ಇತ್ಯಾದಿ

೩. ಎಣ್ಣೆಯ ಕಾಳು : ಶೇಂಗಾ, ಕುಸುಬೆ, ಎಳ್ಳು ಇತ್ಯಾದಿ

೪. ತೊಪ್ಪಲ ಪಲ್ಯ: ಹರಿವೆ, ಬಸಳೆ, ಹಕ್ಕರಿಕಿ ಇತ್ಯಾದಿ.

೫. ಕಾಯಿಪಲ್ಯ : ಹೀರೆ, ಪಡುವಲ, ಭೆಂಡಿ, ಸೌತೆ, ಸೋರೆ, ಕುಂಬಳ, ಬದನೆ ಇತ್ಯಾದಿ.

೬. ಗೆಡ್ಡೆಗೆಣಸು : ಬಟಾಟೆ, ಗೆಣಸು, ಈರುಳ್ಳಿ, ಬೆಳ್ಳುಳ್ಳು, ಗಜ್ಜರಿ, ಮೂಲಂಗಿ, ಕೆಸು, ಸೂರಣಗಡ್ಡೆ.

೭. ಮಸಾಲೆ ಜೀನಸು : ಅರಿಷಿಣ, ಶುಂಠಿ, ಜೀರಿಗೆ, ಸಾರಿವೆ, ಹವೀಜ.

೮. ಹಣ್ಣುಹಂಪಲು : ಬಾಳೆ, ಪೇರಲ, ಮಾವು, ಹಲವು, ಸೀತಾಫಲ, ಪಪಾಯಿ, ಅನಾನಸ್, ಕಿತ್ತಳೆ, ಸೇಬು ಇತ್ಯಾದಿ.

ಪ್ರಾಣಿಜನ್ಯ ಆಹಾರಗಳು : ಹಾಲು, ಮೊಸರು, ಮಜ್ಜಿಗೆ, ಬೆಣ್ಣೆ ತುಪ್ಪ ಇವು ಸಾಮಾನ್ಯವಾಗಿ ಎಲ್ಲರೂ ಸೇವಿಸುವ ವಸ್ತುಗಳಾಗಿವೆ.

ಇನ್ನು ಧಾರ್ಮಿಕ ದೃಷ್ಟಿಯಿಂದ, ನೈತಿಕ ದೃಷ್ಟಿಯಿಂದ, ಆರೋಗ್ಯದ ದೃಷ್ಟಿಯಿಂದ ನಿಷಿದ್ಧವೆಂದು ತಿಳಿಯಲ್ಪಡುತ್ತಿರುವ ಪ್ರಾಣಿಜನ್ಮ ವಸ್ತುಗಳು– ತತ್ತಿಗಳು, ಮೀನ, ಮಾಂಸ.

ಸಾಮಾನ್ಯವಾಗಿ ಯಾವುದೇ ಆಹಾರ ವಸ್ತುಗಳನ್ನು ಇತ್ತಿತ್ತಲಾಗಿ ಮೂಲ ಸ್ವರೂಪದಲ್ಲಿಯೇ ಸೇವಿಸುವುದು ಕಡಿಮೆ. ಬೀಸಿ, ಕುಟ್ಟಿ, ಅರೆದು, ಬೇಯಿಸಿ, ಹುರಿದು, ಕರಿದು, ಸುಟ್ಟು ರೂಪಾಂತರಪಡಿಸಿ ತಿನ್ನುವ ರೂಢಿಯೇ ಹೆಚ್ಚು, ಇದರಲ್ಲಿ ಆರೋಗ್ಯದ ದೃಷ್ಟಿಗಿಂತ ಬಾಯಿ ರುಚಿಯೇ ಮುಖ್ಯ ಪಾತ್ರ ವಹಿಸುತ್ತದೆ. ಆಹಾರ ಸೇವನೆಯು ಅನಿವಾರ್ಯವಾದ ನೈಸರ್ಗಿಕ ಕ್ರಿಯೆ ಎಂಬ ಭಾವನೆಯು ಮರೆಯಾಗಿ, ಆಹಾರವು ಒಂದು ಪ್ರಮುಖ ವಿಲಾಸ ವಸ್ತುವೇ ಆಗುಬಿಟ್ಟಿದೆ.

ಆದರೆ ಆರೋಗ್ಯಪೂರ್ಣವಾದ ಜೀವನವೇ ನಮ್ಮ ಆಹಾರ ಸೇವನೆಯು ನಿರ್ವಿವಾದವಾದ ಉದ್ದೇಶವಾಗಿರುವುದರಿಂದ, ಆರೋಗ್ಯ ಜೀವನಕ್ಕೆ ಭಾದಕವಾದ, ನಮ್ಮ ಆಹಾರ ವ್ಯವಹಾರಗಳಲ್ಲಿಯ ಪ್ರತಿಯೊಂದು ಕ್ರಿಯೆಯಲ್ಲಿಯ ಲೋಪ–ದೋಷಗಳನ್ನು ನಾವು ನಿಷ್ಠುರವಾಗಿಯೂ ನಿರ್ಧಾರಪೂರ್ವಕವಾಗಿಯೂ, ತಿಳಿದುಕೊಳ್ಳಲಿಕ್ಕೂ, ಸರಿಪಡಿಸಿಕೊಳ್ಳಲಿಕ್ಕೂ, ತೆರೆದ ಮನಸ್ಸಿನಿಂದ ಸಿದ್ಧರಿರಲೇಬೇಕು.

ನಮ್ಮ ಆರೋಗ್ಯವು ನಿರಂತರವಾದ ಆಹಾರ ವ್ಯವಹಾರಗಳಲ್ಲಿರುತ್ತದೆ. ತಾತ್ಕಾಲಿಕವಾದ ಔಷಧ ಉಪಚಾರಗಳಲ್ಲಿ ಅಲ್ಲ. 'ನಾಸ್ತಿ ಮೂಲಂ ಅನೌಷಧಂ' ಪ್ರತಿಯೊಂದು ವನಸ್ಪತಿ ವಸ್ತುವೂ ಔಷಧಿ ಗುಣಯುಕ್ತವಾಗಿಯೇ ಇರುತ್ತದೆ.

ನಮ್ಮ ಆಹಾರ ವ್ಯವಹಾರಗಳಲ್ಲಿಯ ಲೋಪದೋಷಗಳಿಂದಲೇ ನಮಗೆ ರೋಗ ಬರುತ್ತದೆ. ಆ ಲೋಪದೋಷಗಳನ್ನು ರೋಗದ ಕಾರಣಗಳನ್ನೇ ಕಂಡು ಹಿಡಿದು, ಸರಿಪಡಿಸಿಕೊಂಡರೆಯೇ ಮಾತ್ರ ಪರಿಪೂರ್ಣರೋಗ ನಿರ್ಮೂಲನವಾಗುತ್ತದೆ. ತಾತ್ಕಾಲಿಕವಾದ ರೋಗಪರಿಹಾರಕ್ಕಿಂತ, ಚಿರಂತನವಾದ ರೋಗ ಪ್ರತಿಬಂಧಕ ಮಾರ್ಗಗಳನ್ನು ಅನುಸರಿಸುವುದೇ ಬುದ್ಧಿವಂತಿಕೆ ಲಕ್ಷಣ.

ಪರಂಪರಾಗತ ರೂಢಿಗಳಿಂದ ಓದಿ, ಕೇಳಿ ನಮಗೆ ಜ್ಞಾನವಾಗುತ್ತದೆ. ಆದರೆ ವಿಚಾರಪೂರ್ವಕ ಸ್ವತಃ ಪ್ರಯೋಗ ಮಾಡುತ್ತ ಮಾಡುತ್ತ ಪಡೆಯುವ ಅನುಭವವೇ ವಿಜ್ಞಾನ. ಆದ್ದರಿಂದ ಏನನ್ನೂ, ವಿಚಾರ ಮಾಡದೆ, ಕುರುಡರಂತೆ, ಅಂಧಶ್ರದ್ಧೆಯಿಂದ ಅನುಸರಿಸಬಾರದು.

ಯಸ್ಯ ನಾಸ್ತಿ ಸ್ವಯಂ ಪ್ರಜ್ಞಾ– ಶಾಸ್ತ್ರಂ ತಸ್ಯ ಕರೋತಿ ಕಿಂ? ಅಂದರೆ ಸ್ವತಂತ್ರ ಶಕ್ತಿ–ವಿವೇಕ ಬುದ್ಧಿ ಇಲ್ಲದವನಿಗೆ ಶಾಸ್ತ್ರಾಭ್ಯಾಸದಿಂದಲೂ ಕೂಡ, ಏನೂ ಪ್ರಯೋಜನ ಆಗುವುದಿಲ್ಲ. ಕಣ್ಣೇ ಇಲ್ಲದವನಿಗೆ ಕನ್ನಡಕ ಏನು ಸಹಾಯ ಮಾಡೀತು? ಆದ್ದರಿಂದ ಸಾರಾಸಾರ–ಯುಕ್ತಾ ಯುಕ್ತ ಯಾವುದು? ಎಂಬುದನ್ನು ತಿಳಿದುಕೊಳ್ಳುವ, ಸ್ವತಂತ್ರ ವಿಚಾರಶಕ್ತಿಯನ್ನು ಬೆಳೆಸಿಕೊಳ್ಳಲೇಬೇಕು.

* ನಿಸರ್ಗ ಚಿಕಿತ್ಸಾ ಸಮಿತಿ. ಬೆಂಗೇರಿ, ಹುಬ್ಬಳ್ಳಿ.

# ಪಂಚಭೂತಗಳಿಗೆ ಪ್ರಣಾಮ *

–ಜಿ.ವಿ. ವೆಂಕಟನಾರಾಯಣ ಶಾಸ್ತ್ರಿ

ವಿಶ್ವದ ಸೃಷ್ಟಿಗೆ ಕಾರಣವಾದ ಪಂಚಭೂತಗಳ ಬಗ್ಗೆ ತಿಳಿದಾಯ್ತು. ನಮ್ಮ ಶರೀರ ಮತ್ತು ಮನಸ್ಸುಗಳೂ ಸಹ ಪಂಚಭೂತಗಳ ಸೃಷ್ಟಿಯೇ. ನಾವು ಯಾವುದರಿಂದ ಆಗಿದ್ದೇವೆಯೋ ಅವುಗಳನ್ನು ಅವಶ್ಯಕತೆ ಎಂಬಂತೆ ಉಪಯೋಗಿಸಿದರೆ ಸಾಲದು ಅವುಗಳ ಬಗ್ಗೆ ಜ್ಞಾನ ಹಾಗೂ ಗೌರವ, ಅವುಗಳ ಸ್ವಚ್ಛತೆಯ ಕಡೆಗೆ ಗಮನ, ಇವೆಲ್ಲವೂ ಮಾನವ ಜವಾಬ್ದಾರಿ. ಪ್ರಕೃತಿಯ ಬಗ್ಗೆ ನಾವು ತೋರುತ್ತಿರುವ ತಿರಸ್ಕಾರ, ಅವಳು ಸೇವಕಿ ಎಂಬಂತೆ ನಾವು ಉಪಯೋಗಿಸಿಕೊಳ್ಳುತ್ತಿರುವ ರೀತಿ ನಮಗೆ ಗೌರವ ತರುವಂಥದ್ದಲ್ಲ. ಸೃಷ್ಟಿಯ ಮೂಲವಸ್ತುಗಳನ್ನೇ ಹಾಳು ಮಾಡಿದರೆ ನಾವು ಬದುಕುವುದು ಹೇಗೆ? ಮರದ ಮೇಲೆ ಕುಳಿತು ಅದರ ಬುಡವನ್ನೇ ಕಡಿದಂತೆ !.

ಅವುಗಳ ಗುಣಗಳನ್ನು ನಮ್ಮ ಅವಶ್ಯಕತೆಗೆ ತಕ್ಕಂತೆ ಬಳಸಿಕೊಳ್ಳಬಹುದು. ನಾವು ಅವುಗಳನ್ನು ಸದಾ ಬಳಸಿಕೊಳ್ಳುವ ಅನಿವಾರ್ಯತೆ ಇರುವುದರಿಂದ, ಬಳಸಿಕೊಳ್ಳುವುದಕ್ಕೂ, ಜ್ಞಾನದಿಂದ ಬಳಸಿಕೊಳ್ಳುವುದಕ್ಕೂ ವ್ಯತ್ಯಾಸವಿದೆ. ಅವುಗಳ ಸಮತೋಲನೆಯೇ ನಮ್ಮ ಆರೋಗ್ಯ. ತಾಳ ತಪ್ಪಿದಲ್ಲಿ ಅನಾರೋಗ್ಯ, ಅದೇ ಕಾಯಿಲೆ. ಯಾವ ಪಂಚಭೂತ ಶರೀರದಲ್ಲಿ ಹೆಚ್ಚಿದೆಯೋ ಅದನ್ನು ಸಮತ್ವಕ್ಕೆ ತರುವುದೇ ನಿಸರ್ಗೋಪಚಾರದ ಉದ್ದೇಶ. ಅದೇ ರೀತಿ ಕಡಿಮೆಯಾಗಿದ್ದಲ್ಲಿ ಹೆಚ್ಚಿಸಬೇಕು.

**ಪ್ರಶ್ನೆ: ಜೀವಂತ ದೇಹಕ್ಕೆ ಜೀವಂತ ಔಷಧಿ ಎಂದಿರಿ, ಪಂಚಭೂತಗಳು ಜಡವಲ್ಲವೇ ?**

ತಮ್ಮಷ್ಟಕ್ಕೇ ತಾವೇ ಜಡ. ಆದರೆ ಜೀವಿಗೆ ಇದು ಪೂರಕ. ಇವಿಲ್ಲದೆ ಜೀವಿ ಜೀವಿಸಲಾರ. ಮಣ್ಣು ಜಡ. ಅದರಲ್ಲಿ ಬಿದ್ದ ಒಂದು ಸಣ್ಣ ಬೀಜಕ್ಕೆ ಪಂಚಭೂತಗಳ್ಳೆದೂ ಸೇರಿ ಅದರ ಹುಟ್ಟು, ಬೆಳವಣಿಗೆಗಳಲ್ಲಿ ಸಹಾಯ ಮಾಡಿ ಹೆಮ್ಮರವಾಗಿ ಬೆಳೆಸಬಲ್ಲವು. ಇದು ಸೃಷ್ಟಿ ವೈಚಿತ್ರ್ಯ. ಇದು ಮನುಜನ ಬುದ್ಧಿಗೆ ನಿಲುಕದ ಮಾತು. ಇದನ್ನು ಹಾಗೆಯೇ ಒಪ್ಪಿಕೊಳ್ಳುವುದರಲ್ಲಿಯೇ ನಮ್ಮ ಬುದ್ಧಿವಂತಿಕೆ ಇದೆ.

**ಪ್ರಶ್ನೆ: ನಾವು ಉಪಯೋಗಿಸುವ ಬೇರೆಯ ಔಷಧಿಗಳೂ ಜೀವಕ್ಕೆ ಸಹಾಯ ಮಾಡಲಾರವೇ?**

ಇವೆಲ್ಲಾ ನಮ್ಮ ಬುದ್ಧಿಯ ಶಿಶುಗಳು. ಆದರೆ ಪಂಚಭೂತಗಳು ಪರಮಾತ್ಮನ ಸೃಷ್ಟಿ. ನಮ್ಮ ಬುದ್ಧಿ ತಪ್ಪುವುದು ಸಹಜ. ಆದ್ದರಿಂದ ಪಂಚಭೂತಗಳ ಬಳಕೆಯೇ ಬುದ್ಧಿವಂತಿಕೆ.

**ಪ್ರಶ್ನೆ : ಮೂಲಿಕೆಗಳು ಜೀವಂತವಲ್ಲವೇ? ಅವು ಈ ಜಡ ಪಂಚಭೂತಗಳಿಗಿಂತ ಉತ್ತಮವಲ್ಲವೇ?**

ಅವೂ ಸಹ ಪಂಚಭೂತಾತ್ಮಕವೇ. ಆದರೆ ಅವುಗಳ ಗುಣಗಳನ್ನು ನಿರ್ದಿಷ್ಟವಾಗಿ ತಿಳಿದ ಜನ ಕಡಿಮೆ. ಅವುಗಳ ಜೊತೆಯಲ್ಲಿಯೇ ವಾಸಿಸಿದರೆ ಮಾತ್ರ ಅವುಗಳು ಅರ್ಥವಾಗಬಲ್ಲವು. ಇಂದು ಪ್ರಕೃತಿಯಿಂದ ದೂರವಾಗಿರುವುದರಿಂದ ಮತ್ತೆ ಅವುಗಳ ಪುನರುತ್ಥಾನ ಅಷ್ಟು ಸುಲಭವಲ್ಲ. ಪಂಚಭೂತಗಳಿಲ್ಲದೆ ನಮ್ಮ ಜೀವ ಬದುಕಿರಲು ಸಾಧ್ಯವೇ ಇಲ್ಲದಿರುವುದರಿಂದ ಅವುಗಳ ಉತ್ತಮ ಬಳಕೆಯನ್ನು ಅರಿತು ಅದರಂತೆ ನಡೆಯುವುದು ಸುಲಭ. ನಮ್ಮ ಕಾಯಿಲೆಗಳಲ್ಲಿಯೂ ಅದನ್ನು ಮೊದಲು ಬಳಸುವುದು ಉತ್ತಮ. ನಿಸರ್ಗೋಪಚಾರ ಸುಲಭವೂ ಹೌದು, ಸರಳವೂ ಹೌದು.

ಆದರೆ?..... ಏಕೆ ಈ ರಾಗ? ಆದರೆ, ಇಷ್ಟೊಂದು ಮಜಾ ಸಿಕ್ಕಿರುವ ಈ ಕಾಲದಲ್ಲಿ ಸಂಯಮ ಬಯಸುವ ಈ ಮಾರ್ಗ ಯಾರಿಗೆ ಬೇಕು?

ಯಾರು ನಿಜವಾದ ಆರೋಗ್ಯವನ್ನು ಬಯಸುತ್ತಾರೋ ಅವರು ಈ ಕಷ್ಟದ ಮಾರ್ಗದಲ್ಲಿಯೇ ಹೋಗಬೇಕು. ಇದು ಕಷ್ಟ ಅಂದುಕೊಂಡರಷ್ಟೇ ಕಷ್ಟ, ಇಲ್ಲದಿದ್ದರೆ ಸುಲಭ, ಸಹಜವಾದದ್ದು ಸುಲಭವಾಗಿಯೇ ಇರಬೇಕು.

*ಪಂಚಮಹಾಭೂತಗಳಿಗೆ ಪ್ರಣಾಮ*<br>
*ನೀವಿಲ್ಲದೇ 'ಜೀವಕೆ' ಎಲ್ಲಿಯ ಆಯಾಮ ?*<br>
*ಪಂಚಭೂತಗಳಿಂದ ಆದುದು ಈ ಕಾಯ*<br>
*ಪಡೆಯಬೇಕು ರಿಪೇರಿಗಳಿಗೂ ಅವುಗಳದೇ ಸಹಾಯ*<br>
*ಮಿಕ್ಕ ಮಾರ್ಗಗಳೆಲ್ಲ ಬಲು ಕಿರಿಕಿರಿ*<br>
*ಜೊತೆಗೆ ತುಂಬಾ ದುಬಾರಿ*<br>
*ಇದೊಂದೇ ಸುಲಭದ ದಾರಿ*<br>
*ಇಲ್ಲದಿರೆ ಅತ್ತ ಪುಲಿ – ಇತ್ತ ದರಿ*

* 'ನಿಸರ್ಗ ಯೋಗಧಾಮ' ನಂ. ೨/೨೦೫೫, ೧೧ನೇ ಕ್ರಾಸ್, ಎಸ್.ಎಸ್.ಪುರಂ, ತುಮಕೂರು -೫೭೨ ೧೦೨.

